21

ತಿಂಗಳ ಪತ್ರಿಕೆ

ಆಗಸ್ಟ್ 2001

# ಅಚಲ

## ಒಳಗೇನಿದೆ ?







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 16 ಸಂಚಿಕೆ - 8

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಬಿ. ಎನ್. ಸುಮಿತ್ರಾಬಾಯಿ
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

*Printed at*
Lipi Mudrana
Bangalore - 560 004


ಆತ್ಮೀಯರೇ,

ಕಳೆದ 15 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

**ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ.ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ. ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.**

ಅಚಲದ ಚಂದಾ ವಿವರಗಳು ಹೀಗಿವೆ :

ವಾರ್ಷಿಕ ಚಂದಾ : ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಅಜೀವ ಚಂದಾ : ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

ಗಮನಿಸಿ

ಅಚಲ ವಿಳಾಸ ಬದಲಾಗಿದೆ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ
ಬನಶಂಕರಿ 3ನೇ ಹಂತ, ಬೆಂಗಳೂರು - 560 085

ಸಂಪಾದಕೀಯ

# ಬದುಕಿನಲ್ಲಿ, ಸಾವಿನಲ್ಲಿ 'ಬಳಸಲ್ಪಟ್ಟ' ಫೂಲನ್

ಫೂಲನ್ ಸಾವು ಆಕೆಗೂ ಅನಿರೀಕ್ಷಿತವಿರಲಿಲ್ಲ. ಯಾವುದೇ ಕಾರಣಕ್ಕೆ ಬಂದೂಕು ಹಿಡಿದರೂ, ಬಂದೂಕು ಸುಡುವುದು ತಪ್ಪುವುದಿಲ್ಲ. ಆದರೆ ಬಹುಶಃ ಫೂಲನ್‌ಗೂ ತಿಳಿದಿರಲಿಲ್ಲ. ಬದುಕಿನಲ್ಲಷ್ಟೆ ಆಕೆಯ ದೇಹ ಬಳಸಲ್ಪಡಲಿಲ್ಲ, ಸಾವಿನಲ್ಲೂ ಫೂಲನ್ ಶೋಷಿತಳಾತಬಹುದೆಂದು.

ಫೂಲನ್ ಹುಟ್ಟಿದ್ದು ಅತ್ಯಂತ ಹಿಂದುಳಿದ ಮೀನುಗಾರ ಜಾತಿಯಲ್ಲಿ. ಉತ್ತರ ಪ್ರದೇಶದ ಸಣ್ಣ ಹಳ್ಳಿಯಲ್ಲಿ, ಮಲ್ಲಾ ಎಂಬ 'ಕೆಳ ಜಾತಿ'ಯಲ್ಲಿ ಫೂಲನ್ 1963ರಲ್ಲಿ ಹುಟ್ಟಿದಳು. ಹನ್ನೊಂದು ವರ್ಷಕ್ಕೇ ಫೂಲನ್‌ಳ ದೇಹವನ್ನು ವಿವಾಹದ ಹೆಸರಿನಲ್ಲಿ 45 ವರ್ಷದ ಪುಟ್ಟಿ ಲಾಲ್‌ಗೆ ಅರ್ಪಿಸಲಾಯಿತು. ವಿಧುರ ಪುಟ್ಟಿ ಲಾಲ್‌ಗೆ ಮನೆಯಲ್ಲಿ ದುಡಿಯುವ, ಮಗ್ಗುಲಲ್ಲಿ ಮಲಗುವ ಹೆಣ್ಣು ದೇಹ ಬೇಕಿತ್ತು. ಹಿರಿಯರ ಸಮ್ಮತಿ, ಅನುಮತಿಯಿಂದಲೇ ಓರ್ವ ವ್ಯಕ್ತಿ ಹನ್ನೊಂದು ವರ್ಷದ ಬಾಲೆಯ ಮೇಲೆ ಅತ್ಯಾಚಾರ ಮಾಡಬಲ್ಲ ಸವಲತ್ತು ನಮ್ಮ ಸಮಾಜದಲ್ಲಿದೆ. ಎಳೆಯ ಹುಡುಗಿ ಗಂಡನ ಕಾಟವನ್ನು ತಾಳಲಾರದೆ ತವರಿಗೆ ಹಿಂತಿರುಗಿದಾಗ ಆಕೆ 'ಮಾನಗೆಟ್ಟ'ವಳಾದಳು. ಸರಪಂಚನ ಮಗ ಮತ್ತು ಸ್ನೇಹಿತರಿಂದ ಸಾಮೂಹಿಕ ಅತ್ಯಾಚಾರ. ನ್ಯಾಯ ದೊರೆಯುವುದಿರಲಿ, ಪೋಲೀಸರು ಫೂಲನ್‌ಳನ್ನು ಡಕಾಯಿತಳೆಂದು ಕರೆದು, ಬೆತ್ತಲೆ ನಿಲ್ಲಿಸಿದರು. ಸಮಾಜ ಹೊರ ಹಾಕಿದ, ತವರು ನೆಲೆ ನೀಡದ ಈ ಹೆಣ್ಣನ್ನು ಡಕಾಯಿತರು ಹೊತ್ತೊಯ್ದರು. 'ಮಾನವಂತ' ಸಮಾಜದಲ್ಲಿಯೇ ಫೂಲನ್ ಸುರಕ್ಷಿತವಿರಲಿಲ್ಲ, ಇನ್ನು ಚಂಬಲ್ ಕಣಿವೆಯಲ್ಲಿ ಸುರಕ್ಷಣೆ ಎಲ್ಲಿಯದು, ಡಕಾಯಿತರ ನಡುವಿನ ಕಿತ್ತಾಟದಲ್ಲಿ ಮೇಲ್ಜಾತಿಯ ಬಾಬು ಗುಜಾರ್ ಸತ್ತ. ಕೆಳಜಾತಿಯ ಡಕಾಯಿತ ವಿಕ್ರಂ ಮಲ್ಲಾನ ಪ್ರೇಯಸಿಯಾಗಿ ಫೂಲನ್‌ಗೆ ಒಂದಿಷ್ಟು ಪ್ರೀತಿ, ರಕ್ಷಣೆ ದೊರೆಯಿತು. ವಿಕ್ರಮ್ ಆಕೆಗೆ ಬಂದೂಕು ಹಿಡಿಯುವುದನ್ನು ಕಳಿಸಿದ. ಚಂಬಲ್ ಕಣಿವೆಯಲ್ಲಿ ಬದುಕುವುದನ್ನು ಕಲಿಸಿದ. ಅಷ್ಟರಲ್ಲಿ ವಿಕ್ರಮ್ ಮಲ್ಲಾನನ್ನು ಮೇಲ್ಜಾತಿಯ ಶ್ರೀರಾಮ್ ಮತ್ತು ಲಾಲಾ ರಾಮ್ ಕೊಂದು, ಫೂಲನ್‌ಳನ್ನು ಬೆಹ್ಮಾಯಿಗೆ ಎಳೆ ತಂದರು. ಇಲ್ಲಿ ಮೂರು ವಾರಗಳ ಕಾಲ ಈ ಕಿಶೋರಿಯನ್ನು ಮೇಲ್ಜಾತಿಯ ಠಾಕೂರರು ಸತತವಾಗಿ ಮಾನಭಂಗ ಮಾಡಿ, ಹಳ್ಳಿಯ ತುಂಬ ನಗ್ನವಾಗಿ ಮೆರವಣಿಗೆ ಎತ್ತಿ ಅಪಮಾನಿಸಿದರು. ಠಾಕೂರ್‌ಗಳ ಮುಷ್ಟಿಯಿಂದ ತಪ್ಪಿಸಿಕೊಂಡ ಫೂಲನ್, ಚಂಬಲ್ ಸೇರಿದಳು, ಮಾನ್‌ಸಿಂಗ್ ಎಂಬ ಡಕಾಯಿತನೊಡನೆ ಸೇರಿ ತನ್ನ ಗ್ಯಾಂಗ್ ಕಟ್ಟಿದಳು. 1981ರಲ್ಲಿ ತನ್ನ ಮಾನಹರಣ ನಡೆದ ಬೆಹ್ಮಾಯಿಗೆ ಹಿಂತಿರುಗಿ ಚಂಡಿ ಚಾಮುಂಡಿಯಾದಳು, 22 ಜನ ಠಾಕೂರರನ್ನು ಗುಂಡಿಟ್ಟು ಕೊಂದಳು. ಕಿಶೋರಾವಸ್ಥೆಯನ್ನು ದಾಟುವ ಮೊದಲೆ ಫೂಲನ್‌ಳ ಬದುಕಿನಲ್ಲಿ ಇಷ್ಟೊಂದು ಘಟನೆಗಳು! ಮತ್ತೆರಡು ವರ್ಷಕ್ಕೆ ಫೂಲನ್ ಶರಣಾಗತಳಾಗಿ, ಬಂದೂಕು ಕೆಳಗಿಟ್ಟು, 11 ವರ್ಷಗಳ ಗ್ವಾಲಿಯರ್ ಜೈಲಿನಲ್ಲಿ ಕಳೆದಳು.

ಫೂಲನ್‌ಳ ಈ ಕತೆ ನಮ್ಮ ದೇಶದಲ್ಲಿ ಕೆಳಜಾತಿಯ ಬಡ ಹೆಣ್ಣು ಮಕ್ಕಳ ಬದುಕು ಎಷ್ಟು ಅಭದ್ರವಿದೆ ಎಂಬುದಕ್ಕೆ ಕನ್ನಡಿ ಹಿಡಿಯುತ್ತದೆ. ಮನೆಯ ಒಳಗಾಗಲಿ, ಹೊರಗಾಗಲಿ, ನಡುಬೀದಿಯಲ್ಲಾಗಲಿ ಹೆಣ್ಣು ಸುರಕ್ಷಿತವಿಲ್ಲ. ಆಕೆಯ ದೇಹವನ್ನು ವಿವಾಹದ ಒಳಗೆ ಹಕ್ಕಿನಿಂದ ಕಿತ್ತು ತಿಂದರೆ, ಹೊರಗೆ ಜಾತಿಯ ಹಮ್ಮಿನಿಂದ ಕಿತ್ತು ತಿಂದರು. ಅವಳಿಗೆ ತವರಿನಲ್ಲಿ ನೆಲೆ ದೊರೆಯಲಿಲ್ಲ. ಕಾನೂನಿನ ನೆರವು ಸಿಗಲಿಲ್ಲ, ಅವಳ ಬೆತ್ತಲನ್ನು ನಿಂತು ನೋಡಿದ ಹಳ್ಳಿಯ ಜನರು ಸಹಾಯಕ್ಕೆ ಬರಲಿಲ್ಲ, ಫೂಲನ್ ಬಂದೂಕು ಹಿಡಿಯುವವರೆಗೆ ಆಕೆಯ ದೇಹವನ್ನು ಕಿತ್ತು ತಿನ್ನುವ ಹದ್ದುಗಳಿದ್ದವು. ಜೈಲಿನಿಂದ ಬಿಡುಗಡೆಯಾದ ಎರಡು ವರ್ಷಕ್ಕೆ ಫೂಲನ್ ಮಿರ್ಜಾಪುರದಿಂದ ಚುನಾವಣೆಯಲ್ಲಿ ಗೆದ್ದು ಬಂದಳು. ಹನ್ನೊಂದು ವರ್ಷ ಜೈಲಿನಲ್ಲಿ ಕಳೆದ, 55 ಕ್ರಿಮಿನಲ್ ಕೇಸುಗಳಿರುವ, ರಾಜಕೀಯದ ಅನುಭವವಿಲ್ಲದ, ಓದು ಬರಹ ಬಾರದ ಈ ಮಹಿಳೆಗೆ, ಆಕೆಯೆಂದೂ ಕಂಡಿರದ ಮಿರ್ಜಾಪುರ ಕ್ಷೇತ್ರದ ಸಮಾಜವಾದಿ ಪಾರ್ಟಿಯ ಟಿಕೆಟ್ ದೊರೆತದ್ದಾದರೂ ಹೇಗೆ ಎನಿಸಿದರೆ, ಉತ್ತರ ಸುಲಭವಿದೆ. ಇಲ್ಲಿಯೂ ಫೂಲನ್ ಆ ನೆಲದ ಜಾತಿ ರಾಜಕೀಯದಲ್ಲಿ ಬಳಸಿಕೊಳ್ಳಲ್ಪಟ್ಟಳು ಅಷ್ಟೆ.

ಫೂಲನ್‌ಳ ದೇಹ ಸಾವಿನಲ್ಲಿ ಕೂಡಾ ಶೋಷಣೆಯಿಂದ ಮುಕ್ತವಾಗಲಿಲ್ಲ. ಸತ್ತೊಡನೆ ಫೂಲನ್‌ಳ ದೇಹದ ಮೇಲೆ ಆಕೆಯ ತಾಯಿಗೂ ಹಕ್ಕು ಉಳಿಯಲಿಲ್ಲ. ತಾಯಿ ದಿಲ್ಲಿಯಲ್ಲಿಯೇ ಅಂತ್ಯ ಸಂಸ್ಕಾರ ಬಯಸಿದ್ದಳು. ಆದರೆ ದೇಹವನ್ನು ಫೂಲನ್‌ಳ ಚುನಾವಣಾ ಕ್ಷೇತ್ರವಾದ ಮಿರ್ಜಾಪುರಕ್ಕೆ 'ಪಾರ್ಟಿ'ಯ ಜನ ಹೊತ್ತೊಯ್ದರು. ಉತ್ತರ ಪ್ರದೇಶದಲ್ಲಿ ಸದ್ಯದಲ್ಲಿಯೇ ಚುನಾವಣೆ. ಸತ್ತ ಫೂಲನ್‌ಳ ದೇಹ ಕೂಡಾ ಉಪಯೋಗಕ್ಕೆ ಬಂದಿತು. ಅದ್ದೂರಿ ಶವಸಂಸ್ಕಾರ, ಭರ್ಜರಿ ಭಾಷಣ, ಪ್ರತಿಪಕ್ಷಗಳ ಮೇಲೆ ದಂಡಿ ಆಪಾದನೆ. ಇದೀಗ ಫೂಲನ್ ಹೆಸರಿನ ಬಲದ ಮೇಲೆ ಕಿತ್ತಾಡುತ್ತಿದ್ದಾರೆ ಆಕೆಯ ಗಂಡ ಮತ್ತು ತಂಗಿ.

ದೇಹಕ್ಕೆ ಬೆಂಕಿ ತಗುಲಿಸಿತ್ತಷ್ಟೆ, ಮುಲಾಯಂ ಸಿಂಗ್ ಯಾದವ್ ಹೊರಡುತ್ತಿದ್ದಂತೆ, ಕ್ಷಣದಲ್ಲಿ ಗಂಡನೂ ಸೇರಿದಂತೆ, ನೆರೆದಿದ್ದ ರಾಜಕಾರಣಿಗಳು, ಪಾರ್ಟಿ ಪ್ರತಿನಿಧಿಗಳು, ಜನ ಸಮೂಹ ಎಲ್ಲಾ ಮಾಯ. ಬದುಕಿನ ಬೆಂಕಿಯಲ್ಲಿ ಸುಟ್ಟು ಹೋದ ಫೂಲನ್‌ಳ ದೇಹ, ಅಗ್ನಿಗೆ ಆಹುತಿಯಾಗುವುದನ್ನು ಕಾದು ನೋಡಿದ್ದು, ಆಕೆಯ ಮುದಿ ತಾಯಿ ಮಾತ್ರ.

ಫೂಲನ್ ಸತ್ತ ಕೆಲವೇ ದಿನದ ನಂತರ ದೂರದರ್ಶನದ ಚಾನೆಲ್ ಒಂದರಲ್ಲಿ ಎರಡು ಬಾರಿ 'ಬಂಡಿತ್ ಕ್ವೀನ್' ಚಿತ್ರ ಮುಡಿ ಬಂದಿತು. ಚಿತ್ರ ನೋಡುತ್ತಿದ್ದರಂತೆ ಹೊಟ್ಟೆಯೊಳಗೆಲ್ಲ ವಿಪರೀತ ಸಂಕಟ. ಬೆಹ್ಮಾಯಿ, ಇಡೀ ಹಳ್ಳಿಯ ಮುಂದೆ ಫೂಲನ್‌ಳನ್ನು ಬೆತ್ತಲೆಯಾಗಿ ನಿಲ್ಲಿಸಿದ್ದಾರೆ..ಚಲನಚಿತ್ರದಲ್ಲಿ ಫೂಲನ್ ಪಾತ್ರಧಾರಿ ಸಂಪೂರ್ಣ ಬೆತ್ತಲೆ. 'ಒಂದು ಹೆಣ್ಣಿನ ಬದುಕಿನಲ್ಲಿ ಎಷ್ಟೊಂದು ಹಿಂಸೆ ಅತ್ಯಾಚಾರ' ಎಂಬ ಸಂಕಟದ ನಡುವೆಯೇ ಉದ್ಭವವಾದ ಪ್ರಶ್ನೆ - 'ಬೆತ್ತಲೆಯಾಗಿಸದೆ ಫೂಲನ್‌ಳ ಆ ಅಪಮಾನವನ್ನು ಚಿತ್ರೀಕರಿಸಲು ಸಾಧ್ಯವಿರಲಿಲ್ಲವೇ?'. ಇಲ್ಲಿಯೂ ಕಲೆ ಹೆಸರಲ್ಲಿ ಫೂಲನ್‌ಳ ಬದುಕು ಮತ್ತೆ 'ಬಳಕೆ' ಯಾಯಿತೆ, ಪ್ರಶ್ನೆ.

ಇಂದು ಚಂಬಲ್ ಕಣಿವೆಯಲ್ಲಿ ಅನೇಕಾನೇಕ 'ಫೂಲನ್'ಗಳು ಉದ್ಭವವಾಗಿದ್ದರೆ, ಇದು ನಮ್ಮ ಸಮಾಜದಲ್ಲಿ ಹೆಣ್ಣು ಮಕ್ಕಳು ಎಷ್ಟು ಅಭದ್ರರಿದ್ದಾರೆ ಎಂಬುದನ್ನಷ್ಟೆ ಪ್ರತಿಫಲಿಸುತ್ತದೆ. ಫೂಲನ್ ಈ ಎಲ್ಲ ಹೆಣ್ಣುಗಳ ಪ್ರತೀಕವಾಗಿದ್ದಾಳೆ. ಅಸಹಾಯಕ, ಕೆಳ ಜಾತಿಯ ಬಡ ಹೆಣ್ಣುಗಳ ಪ್ರತೀಕವಷ್ಟೆ ಅಲ್ಲ, ಹೆಣ್ಣಿನ ದೇಹ ಎಷ್ಟೆಲ್ಲ ಬಗೆಯಲ್ಲಿ ಬಳಸಲ್ಪಡುತ್ತದೆ ಎಂಬುದರ ಪ್ರತೀಕ. ಅದು ಕೇವಲ ಕಾಮತೃಪ್ತಿಯ ಬೇಟೆಯಾಗಬಹುದು, ಕಲೆಯ ಹೆಸರಿನಲ್ಲಿ ಚಲನಚಿತ್ರವಾಗಿ ಬೆತ್ತಲೆಯಾಗಬಹುದು. ರಾಜಕೀಯದ ಹೆಸರಲ್ಲಿ ಸತ್ತ ದೇಹದ ಮೆರವಣಿಗೆಯಾಗಬಹುದು, ಸಣ್ಣ ದೇಹದ ಎಲ್ಲ ಬಗೆಯ ಶೋಷಣೆಗೆ ಫೂಲನ್ ಪ್ರತೀಕವಾಗುತ್ತಾಳೆ.

ಒಂದು ಸಂದರ್ಶನದಲಿ 'ನೀವು ಮುಂದಿನ ಜನ್ಮದಲ್ಲಿ ಏನಾಗಿ ಹುಟ್ಟ ಬಯಸುವಿರಿ?' ಎಂದು ಕೇಳಿದಾಗ ಫೂಲನ್ ಉತ್ತರಿಸಿದ್ದಳು, 'ಫೂಲನ್ ದೇವಿಯಾಗಿ ಹುಟ್ಟುವುದಕ್ಕಿಂತ ಒಂದು ಪ್ರಾಣಿಯಾಗಿ ಹುಟ್ಟಬಯಸುತ್ತೇನೆ'. ನಮ್ಮ ದೇಶದಲ್ಲಿ ಹೆಣ್ಣಿನ ಸ್ಥಿತಿ ಪ್ರಾಣಿಗಿಂತಲೂ ಕಡೆಯಾಗಿದೆ ಎಂದ ಫೂಲನ್‌ಗೆ, ಅವಳ ಬದುಕಿನ ಅನುಭವಗಳೇ ತಿಳಿಸಿದ್ದವು, ಫೂಲನ್ ಲಿಂಗ ಮತ್ತು ಜಾತಿ ಅಸಮಾನತೆಯ ಪ್ರತೀಕವಾಗಿದ್ದಾಳೆ. ಈ ಲಿಂಗ ಅಸಮಾನತೆ, ಜಾತಿ ಅಸಮಾನತೆ ಅಳಿಯದೆ, ಮತ್ತಷ್ಟು ಫೂಲನ್‌ಗಳು ಜನಿಸುವುದು ನಿಲ್ಲುವುದಿಲ್ಲ.

- ನೇಮಿಚಂದ್ರ

## 'ನಿರ್ಭಯ್ ಸಿಂಗ್' ಎದೆಯಲ್ಲೂ ಭಯ ಹುಟ್ಟಿಸಿದ ಡಾ. ಪ್ರಿಯಾಂಕ ಮಿಶ್ರಾ

ಚಂಬಲ್ ಕಣಿವೆಯ ಹೆಸರೇ ಸಾಕು, ಅಸಮಾನ್ಯರನ್ನೂ ಒಂದಿಷ್ಟು ಅಲುಗಿಸಿಡುತ್ತದೆ. ಅತ್ಯಂತ ಕ್ರೂರ ಡಕಾಯಿತರನ್ನು ಅಡಗಿಸಿಟ್ಟುಕೊಂಡಿರುವ ಕಣಿವೆ. ಇಂತಹ ಚಂಬಲ್ ಕಣಿವೆಯಲ್ಲಿ ನೇಮಕಗೊಂಡ ಮೊಟ್ಟ ಮೊದಲ ಮಹಿಳಾ ಡಿ.ಎಸ್.ಪಿ, ದಿಟ್ಟೆದೆಯ ಡಾ. ಪ್ರಿಯಾಂಕ ಮಿಶ್ರಾ. ಈ ಪ್ರದೇಶದಲ್ಲಿ ಭೀತಿ ಹುಟ್ಟಿಸಿರುವ ಡಕಾಯಿತ ನಿರ್ಭಯ್ ಸಿಂಗ್ ಗುಜ್ಜಾರ್ ಹೆದರುವ ಏಕ ಮಾತ್ರ ವ್ಯಕ್ತಿ ಡಾ. ಪ್ರಿಯಾಂಕ ಮಿಶ್ರಾ. ಈ ಡಕಾಯಿತನ ತಲೆಯ ಮೇಲೆ ಉತ್ತರ ಪ್ರದೇಶದ ಪೋಲೀಸರು ಒಂದು ಲಕ್ಷ ರೂಪಾಯಿಗಳ ಬಹುಮಾನ ಘೋಷಿಸಿದ್ದರೆ, ನಿರ್ಭಯ್ ಸಿಂಗ್, ಪ್ರಿಯಾಂಕರನ್ನು ಕೊಂದವನಿಗೆ ಐದು ಲಕ್ಷರೂಪಾಯಿ ಬಹುಮಾನ ಕೊಡುವುದಾಗಿ ಘೋಷಿಸಿದ್ದಾನೆ! ಇಪ್ಪತ್ತೆಂಟು ವರ್ಷದ ಪ್ರಿಯಾಂಕ, ನಿರ್ಭಯ್ ಸಿಂಗ್ ಎದೆಯಲ್ಲೂ ಭಯ ಹುಟ್ಟಿಸಿದ್ದಾರೆ.

ಪ್ರಿಯಾಂಕ ಇಂದೋರ್ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪಡೆದಿದ್ದಾರೆ. ಪ್ರಿಯಾಂಕ ಉದ್ಯೋಗದ ಮೇಲೆ ನೇಮಿಸಲ್ಪಟ್ಟು ಆಗಮಿಸಿದ ಮೊಟ್ಟ ಮೊದಲ ಠಾಣ, ಚಂಬಲ್. ಆದಾಗಲೆ ಇವರ ಸಾಹಸಗಳು ಡಕಾಯಿತರನ್ನು ಸಾಕಷ್ಟು ಹಿಮ್ಮೆಟ್ಟಿಸಿವೆ. ಪ್ರಿಯಾಂಕ ಅವರ ಪ್ರಯತ್ನದಿಂದ ಈ ಸ್ಥಳದಲ್ಲಿ ಡಕಾಯಿತರು ನಡೆಸುತ್ತಿದ್ದ ಬಹಳಷ್ಟು 'ಕಿಡ್ನಾಪಿಂಗ್' ಯತ್ನಗಳು ಅಸಫಲವಾಗಿವೆ. 'ಈ ಪೋಸ್ಟಿಂಗ್‌ನಲ್ಲಿ ಬಹಳಷ್ಟು ಗಂಡಾಂತರಗಳಿವೆ ಎಂದು ನನಗೆ ಗೊತ್ತಿತ್ತು. ಅವೆಲ್ಲವನ್ನು ನಾನು ಸವಾಲೆಂಬಂತೆ ಸ್ವೀಕರಿಸಿದ್ದೇನೆ. ನನಗೆ ಅಪಾಯಗಳನ್ನು ಎದುರಿಸಿ ಅಭ್ಯಾಸವಿದೆ. ಅಪಾಯಗಳು ನನ್ನ ಕೆಲಸದ ಮುಖ್ಯ ಭಾಗವಾಗಿವೆ, ನನಗೆ ಹೆದರಿಕೆ ಇಲ್ಲ' ಎನ್ನುತ್ತಾರೆ ಡಾ. ಪ್ರಿಯಾಂಕ. ಡೆಸ್ಕ್‌ನಲ್ಲಿ ಕುಳಿತು ಮಾಡುವ ಸುರಕ್ಷಿತ ಕೆಲಸ ಡಾ. ಪ್ರಿಯಾಂಕರನ್ನು ಆಕರ್ಷಿಸದು. 'ಅಪಾಯದೊಡನೆ ಸೆಣಸಾಟ ನನಗೀಗ ಚಟವಾಗಿದೆ. ನನ್ನ ಕೆಲಸವನ್ನು ತೀವ್ರ ಆಸ್ಥೆ, ಆಸಕ್ತಿಗಳಿಂದ ಮಾಡುತ್ತೇನೆ' ಎನ್ನುತ್ತಾರೆ ಪ್ರಿಯಾಂಕ. ಕಾರ್ಯಾಚರಣೆಯಲ್ಲಿ ತೊಡಗುವುದು, ಅಪಾಯದೊಡನೆ ಸೆಣಸಾಡುವುದು ಇವರಿಗೆ ರೋಮಾಂಚಕ ಅನುಭವವಾಗಿದೆ. ಆದರೆ ತಮ್ಮ ಯಾವ ಸಾಹಸವನ್ನೂ ಪ್ರಿಯಾಂಕ ವೈಭವೀಕರಿಸುವುದಿಲ್ಲ. 'ನಾನು ಕೇವಲ ನನ್ನ ಕೆಲಸವನ್ನು ಮಾಡುತ್ತಿದ್ದೇನೆ' ಎನ್ನುತ್ತಾರೆ. ಈಕೆಯ ಪತಿ ಸಹಾಯಕ ಕಮಾಂಡರ್ ಆಗಿ 17ನೇ ಬೆಟಾಲಿಯನ್‌ನಲ್ಲಿದ್ದಾರೆ. ಪ್ರಿಯಾಂಕ ತಮ್ಮ ಜೀವನದ ಬಗ್ಗೆ, ತಮ್ಮ ಪತಿಯ ಜೀವದ ಬಗ್ಗೆ ಅಷ್ಟಾಗಿ ಚಿಂತಿಸುವುದಿಲ್ಲ. ಆದರೆ, ತಮ್ಮ ಎರಡು ವರ್ಷದ ಮಗುವಿನ ಬಗ್ಗೆ ಈ ತಾಯಿಗೆ ಚಿಂತೆ ಕಾಡುವುದುಂಟು. ಮರುಕ್ಷಣ 'ಇದೆಲ್ಲ ನನ್ನ ಕೆಲಸದ ಭಾಗ' ಎಂದು ತಲೆ ಕೊಡವಿ ದಿಟ್ಟವಾಗಿ ನಿಲ್ಲುತ್ತಾರೆ ಗಟ್ಟಿ ಎದೆಯ ಡಿ.ಎಸ್.ಪಿ. ಪ್ರಿಯಾಂಕ ಮಿಶ್ರಾ. ಬೇಕಿದ್ದಾರೆ ನಮ್ಮ ಭಾರತಕ್ಕೆ ಪ್ರಿಯಾಂಕ ಚೋಪ್ರಾರಂತಹ ರೂಪಸಿಯರಲ್ಲ, ಪ್ರಿಯಾಂಕ ಮಿಶ್ರಾರಂತಹ ಸಾಹಸಿಗಳು.

# ಮ್ಯಾಡಂ ಭಿಕಾಜಿ ಕಾಮಾ

- ಜ್ಯೋತ್ಸ್ನಾ ಕಾಮತ್

'ಇದು ಇಂಡಿಯದ ಸ್ವಾತಂತ್ರ್ಯ ಪತಾಕೆ! ಇದಕ್ಕಾಗಿ ಪ್ರಾಣತೆತ್ತ ಎಳೆಯ ಭಾರತೀಯರ ರಕ್ತದಿಂದ ಪವಿತ್ರವಾಗಿದೆ! ಈ ಬಾವುಟದ ಹೆಸರಿನಲ್ಲಿ ಇಲ್ಲಿರುವ ಸ್ವಾತಂತ್ರ್ಯ ದೇವಿಯ ಆರಾಧಕರಿಗೆಲ್ಲ ವಿನಂತಿಸಿಕೊಳ್ಳುತ್ತೇನೆ - ದಯವಿಟ್ಟು ಎದ್ದೇಳಿ! ಭಾರತ ಸ್ವಾತಂತ್ರ್ಯ ಬಾವುಟಕ್ಕೆ ಸೆಲ್ಯೂಟ್ ಮಾಡಿ!' ವೇದಿಕೆಯ ಮೇಲಿದ್ದ ಭಾರತೀಯ ಉಡುಗೆಯಲ್ಲಿದ್ದ ಮಹಿಳೆಯೋರ್ವಳು, ನೂರಾರು ದೇಶಗಳ ಸಾವಿರಾರು ಪ್ರತಿನಿಧಿಗಳಿಗೆ ಗಂಭೀರವಾದ ಮೆಲುದನಿಯಲ್ಲಿ ವಿನಂತಿಸಿಕೊಂಡಳು. ಮೂಕವಿಸ್ಮಿತರಾದ ಜನ ಎದ್ದು ನಿಂತು ವಂದಿಸಿದರು. ವಿದೇಶಿ ನೆಲದಲ್ಲಿ ಮೊದಲಬಾರಿ ವಂದಿಸಲ್ಪಟ್ಟ ಭಾರತೀಯ ಧ್ವಜವಾಗಿತ್ತು, ಅದು. ಮಹಿಳೆಯಾಗಿದ್ದರು, - ಮ್ಯಾಡಂ ಭಿಕಾಜಿ ಕಾಮಾ. ಸಂದರ್ಭ - 1907ನೇ ವರ್ಷದ ಆಗಸ್ಟ್ ತಿಂಗಳಿನಲ್ಲಿ ಜರ್ಮನಿಯ ಸ್ಟಟ್‌ಗಾರ್ಟ್‌ದಲ್ಲಿ ನಡೆದ ಪ್ರಥಮ ಅಂತರರಾಷ್ಟ್ರೀಯ ಸಮಾಜವಾದಿ ಸಮ್ಮೇಳನ.

ಭಾರತದ ಸ್ವಾತಂತ್ರ್ಯ ಪ್ರಾಪ್ತಿಯ ನಲವತ್ತು ವರ್ಷಗಳ ಪೂರ್ವದ ಘಟನೆ. ಅದಾಗಲೆ ಭಾರತದ ಹಲವಾರು ರಾಜ್ಯಗಳಲ್ಲಿ ಹೊತ್ತಿ ಹೊಗೆಯಾಡುತ್ತಿದ್ದ ಸ್ವಾತಂತ್ರ್ಯ ಆಂದೋಲನದ ವಿಚಾರದ ಸ್ಪಷ್ಟವಾದ ಕಲ್ಪನೆ ಯುರೋಪಿನ ರಾಷ್ಟ್ರಗಳಿಗಿರಲಿಲ್ಲ. ರಾಜದ್ರೋಹದ ಆರೋಪದ ಮೇಲೆ ಬ್ರಿಟಿಷ್ ಸರಕಾರ ಅದೆಷ್ಟೋ ಕ್ರಾಂತಿಕಾರಿಗಳನ್ನು ಬಂಧಿಸಿ ಕಾಳಾಪಾಣಿ ರುಚಿ ತೋರಿಸಿದರೂ ಅದು ಆ ಸಾಮ್ರಾಜ್ಯದ ಆಂತರಿಕ ಸಮಸ್ಯೆಯೆಂದೇ ಹಲವಾರು ಧೀಮಂತರು ನಂಬಿದ್ದರು. ಭಾರತೀಯ ಪ್ರಜೆಗಳಿಗೆ ಸ್ವತಂತ್ರವಾಗಿ ಸಾಮ್ರಾಜ್ಯದ ವಿರುದ್ಧ ಬರೆಯುವ, ಭಾಷಣ ಮಾಡುವ ಸ್ವಾತಂತ್ರ್ಯಕ್ಕೆ ಬ್ರಿಟಿಷ್ ಸರಕಾರ, ಸರ್ವವಿಧದಲ್ಲಿ ಕಡಿವಾಣ ಹಾಕಲು ನಿರತವಾಗಿತ್ತು. ಅಂಥಲ್ಲಿ ಅಂತರ್‍ರಾಷ್ಟ್ರೀಯ ಸಮ್ಮೇಳನದಲ್ಲಿ ಅದು ಹೇಗೋ ಪ್ರವೇಶ ದೊರಕಿಸಿ ಮ್ಯಾಡಾಂ ಕಾಮಾ ಬ್ರಿಟಿಷ್ ವಸಾಹತುವಾದದ ಕರಾಳರೂಪದ ಪರಿಚಯವನ್ನು ಸಭೆಗೆ ಮಾಡಿಕೊಟ್ಟಳು. ಜಗತ್ತಿನ ಮಾನವ ಜನಾಂಗದ (1/5) ಐದರಲ್ಲಿ ಒಂದು ಭಾಗದಷ್ಟಿದ್ದ ಜನತೆ ಸಾಮ್ರಾಜ್ಯವಾದದ ದಾಸ್ಯದಲ್ಲಿ ತೊಳಲಾಡುತ್ತಿರುವಾಗ, ವಿಶ್ವಸಮಾಜವಾದಕ್ಕೇನು ಅರ್ಥ? ಎಂಬು ವಾದಿಸಿದಳು. ನೆರೆದ ಜನ ಬೆರಗಾದರು. ಈಕೆ ಮಹಾರಾಣಿಯೋ, ರಾಜಕುಮಾರಿಯೋ ಇರಬೇಕು ಎಂದುಕೊಂಡರು. ಇಂಡಿಯ ಆಗ ಮಹಾರಾಜರ ಬೀಡಾಗಿತ್ತು, ತಾನೆ? ಆದರೆ ಯಾವ ಮಹಾರಾಣಿಗೂ ಮೀರಿದ ಗತ್ತು, ಗಾಂಭೀರ್ಯ, ಕೆಚ್ಚೆದೆಗಳು ಕಾಮಾಳಲ್ಲಿದ್ದವು.

1861ನೇ ಇಸವಿಯ ಸೆಪ್ಟೆಂಬರ್ 24ನೇ ತಾರೀಕಿಗೆ ಶ್ರೀಮಂತ ಫಾರಸಿ ಕುಟುಂಬದಲ್ಲಿ ಕಾಮಾ ಜನ್ಮವೆತ್ತಿದಳು. ತಂದೆ, ಸೊರಾಬ್ಜಿ ಫ್ರಾಮಜಿ ಪಟೇಲ್, ದೊಡ್ಡ ವ್ಯಾಪಾರಿಯಾಗಿದ್ದರು. ಆದಾಗಲೇ ಇಂಗ್ಲೀಷ್ ಶಿಕ್ಷಣ ಪಡೆದು ಉದ್ಯೋಗ - ವ್ಯಾಪಾರ, ಸಮಾಜಸೇವೆಗಳಲ್ಲಿ ಮುಂದುವರಿದ ಫಾರಸಿಗಳಲ್ಲಿ ಹೆಚ್ಚಿನವರು ಬ್ರಿಟಿಷರ ಕೃಪಾಪೋಷಿತರಾಗಿದ್ದರು. ಆದರೆ ಭಿಕಾಜಿ, ಇಂಗ್ಲಿಷ್ ಉಚ್ಚಶಿಕ್ಷಣ ಹೊಂದಿ ಚಿಕ್ಕಂದಿನಿಂದಲೇ ಬ್ರಿಟಿಷ್ ವಿರೋಧಿ ನಿಲುವು ತಾಳಿದ್ದಳು. ರಾಜನೀತಿ ಹಾಗೂ ಅನೇಕ ಭಾಷೆಗಳನ್ನು ಕಲಿಯುವುದರಲ್ಲಿ ವಿಶೇಷ ಒಲವು ಹೊಂದಿದ್ದಳು. ಶ್ರೀಮಂತ ನ್ಯಾಯವಾದಿಯಾಗಿದ್ದ ರುಸ್ತುಂ ಕೆ. ಆರ್. ಕಾಮಾ ಅವರೊಂದಿಗೆ ನಡೆದ ವಿವಾಹ ಬಹುಕಾಲ ಬಾಳಲಿಲ್ಲ. ಕಾಮಾ ಕಟ್ಟಾ ಬ್ರಿಟಿಷ್ ಬೆಂಬಲಿಗರಾಗಿದ್ದರು. ಭಿಕಾಜಿ ಸಾಮ್ರಾಜ್ಯವಾದಿ ಬ್ರಿಟಿಷರ ಕಡು ವಿರೋಧಿ!

ಭಿಕಾಜಿ ಕಾಮಾ ಅನೇಕ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿದಳು. ಮುಂಬೈಯಲ್ಲಿ ಕಾಣಿಸಿಕೊಂಡ ಪ್ಲೇಗ್ ಪಿಡುಗಿನ ಕಾಲಕ್ಕೆ ಸ್ವಯಂಸೇವಕಿಯಾಗಿ ರೋಗಿಗಳ ಶುಶ್ರೂಷಾ ಪದಕವನ್ನು ನಡೆಸಿದಳು. ಕೊನೆಗೆ ಸ್ವತಃ ರೋಗ ತಗಲಿ ಬದುಕುಳಿದರೂ ತುಂಬ ನಿಶ್ಶಕ್ತಳಾದ ಕಾರಣ ವೈದ್ಯರ ಸಲಹೆಯಂತೆ ಯುರೋಪಿಗೆ ತೆರಳಿದಳು. ಮುಂದೆ ಅದೇ ಅವಳ ಕರ್ಮಭೂಮಿಯಾಯಿತು.

ಲಂಡನ್ನಿನಲ್ಲಿ ಕೆಲಕಾಲ ಸ್ವಾತಂತ್ರ್ಯ ಚಳುವಳಿಯ ಪಿತಾಮಹರೆಂದು ಗುರುತಿಸಲ್ಪಡುವ ದಾದಾಭಾಯಿ ನವರೋಜಿಯವರ ಕಾರ್ಯದರ್ಶಿಯಾಗಿದ್ದಳು. ಯುರೋಪಿಗೆ ಬರುತ್ತಿದ್ದ ಅನೇಕ ಭಾರತೀಯ ಕ್ರಾಂತಿಕಾರಿಗಳಿಗೆ ಅವಳ ಮನೆ ಆಶ್ರಯ ಸ್ಥಾನವಾಗಿತ್ತು. ಸ್ಟಟ್‌ಗಾರ್ಟ ಸಾಹಸದ ಬಳಿಕ ಕಾಮಾ, ಅಮೇರಿಕನ್ ಯಾತ್ರೆ ಕೈಗೊಂಡಳು. ಅಮೇರಿಕನ್ನರಲ್ಲಿ ಭಾರತೀಯರ ಸ್ವಾತಂತ್ರ್ಯ ಚಳುವಳಿಯ ಕುರಿತು ಜಾಗ್ರತೆ ಮೂಡಿಸಲು ಹೆಣಗಿದಳು. 'ಪಾರ್ಲಿಮೆಂಟ್ ವ್ಯವಸ್ಥೆಯ ತಾಯಿ'

(Mother of parliamentary demoeracy) ಎಂದು ಮೆರೆಯುವ ಬ್ರಿಟನ್ ಸ್ವತಃ ಕೈಗೊಳ್ಳುತ್ತಿದ್ದ ಸ್ವಾತಂತ್ರ್ಯ ಹೋರಾಟಗಾರರನ್ನು ಹತ್ತಿಕ್ಕುವ ಕ್ರಮಗಳನ್ನು ಅಮೇರಿಕನ್ನರಿಗೆ ಪರಿಚಯಿಸುವ ಅನೇಕ ಭಾಷಣಗಳನ್ನು ಮಾಡಿದಳು.

ಕಾಮಾ ಸ್ಟಟ್‌ಗಾರ್ಟ್‌ನಲ್ಲಿ ಹಾರಿಸಿದ ಭಾರತೀಯ ರಾಷ್ಟ್ರಧ್ವಜ ಈಗಿನಂತಿರಲಿಲ್ಲ. ಅದರ ತ್ರಿವರ್ಣಗಳಲ್ಲಿ ಹಸಿರು, ಕೇಸರಿ, ಕೆಂಪು ಬಣ್ಣಗಳಿದ್ದವು. ಶಕ್ತಿ, ವಿಜಯ, ಉತ್ಸಾಹಗಳನ್ನು ಅವು ಪ್ರತಿನಿಧಿಸುತ್ತಿದ್ದವು ಅದರಲ್ಲಿ 8 ಕಮಲಗಳು ಸಂಸ್ಥಾನಗಳನ್ನು ಹೂಗಳು, ರಾಜ್ಯಗಳನ್ನು ಸಂಕೇತಿಸುತ್ತಿದ್ದವು. ಸೂರ್ಯ ಹಾಗು ಚಂದ್ರರ (ಹಿಂದು ಮುಸ್ಲಿಂ) ಚಿತ್ರಗಳು ತುದಿಯಲ್ಲಿದ್ದರೆ, 'ವಂದೇ ಮಾತರಂ' ಅಕ್ಷರಗಳನ್ನು ನಟ್ಟನಡುವೆ ಮೂಡಿಸಲಾಗಿತ್ತು. ವೀರ ಸಾವರ್ಕರರು ಹಾಕಿಕೊಟ್ಟ ಬಾವುಟ ಚಿತ್ರವನ್ನು ಧ್ವಜರೂಪದಲ್ಲಿ ಸ್ವತಃ ಭಿಕಾಜಿಕಾಮಾ, ಸಹಾಯಕರೊಂದಿಗೆ ಹೊಲಿದು ಸಿದ್ಧ ಪಡಿಸಿದರೆಂದು ಪ್ರತೀತಿ!

ಲಂಡನ್ನಿಗೆ ಹಿಂದಿರುಗಿದ ಬಳಿಕ ದೇಶಭಕ್ತಿಗೆ ಮೀಸಲಾದ ಪುಸ್ತಕ ಪ್ರಕಟಣೆ ಕೈಕೊಂಡಳು. ಅನೇಕ ಕ್ರಾಂತಿಕಾರರಿಗೆ ಗುಪ್ತಧನ ಸಹಾಯ ಒದಗಿಸುತ್ತಿದ್ದಳು. ಬ್ರಿಟಿಷರು ಬಂಧಿಸಿ ಭಾರತಕ್ಕೆ ಅವಳನ್ನು ಸಾಗಿಸಲಿದ್ದಾರೆಂಬ ಸುಳುವು ಸಿಕ್ಕೊಡನೆ ಪ್ಯಾರಿಸಿಗೆ ಹೋಗಿ ನೆಲೆಸಿದಳು. ಪ್ಯಾರಿಸ್ ಆ ದಿನಗಳಲ್ಲಿ ವಿಶ್ವದ ಕ್ರಾಂತಿಕಾರರಿಗೆಲ್ಲ ತವರುಮನೆಯಾಗಿತ್ತು. ಲೆನಿನ್ ಕೂಡ ಕಾಮಾ ಮನೆಯಲ್ಲಿ ಭಾರತೀಯ ಕ್ರಾಂತಿಕಾರರನ್ನು ಭೇಟಿಮಾಡಿದ್ದರು. ಸರೋಜಿನಿನಾಯ್ಡು ಅವರ ಸೋದರ ಬೀರೇಂದ್ರ ಚಟ್ಟೋಪಾಧ್ಯಾಯರು ಗಡೀ ಪಾರು ಮಾಡಲ್ಪಟ್ಟು, ಪ್ಯಾರಿಸಿನಲ್ಲಿದ್ದರು. ವೀರ ಸಾವರ್ಕರರು ಬರೆದ 1857ರ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸವನ್ನು ಬ್ರಿಟಿಷ್ ಪ್ರಕಾಶಕರಿಂದ ಮುದ್ರಿಸುವದು ಅಸಾಧ್ಯವಾಗಿತ್ತು. ಮ್ಯಾಡಾಂ ಕಾಮಾ ಯುಕ್ತಿಯಿಂದ ಅದು ಹಾಲಂಡಿನಲ್ಲಿ ಮುದ್ರಣವಾಗುವಂತೆ ನೋಡಿಕೊಂಡಳು. ಬಳಿಕ ಭಾರತಕ್ಕೆ ಅದರ 'ಕಳ್ಳಸಾಗಾಟ' ಮಾಡುವುದರಲ್ಲೂ ಪ್ರಮುಖ ಪಾತ್ರ ವಹಿಸಿದ್ದಳು.

ಬ್ರಿಟಿಷರಿಂದ ಬಹಿಷ್ಕರಿಸಲ್ಪಟ್ಟು 'ವಂದೇಮಾತರಂ' ಪತ್ರಿಕೆಯನ್ನು ಕೆಲಕಾಲಸಂಪಾದಿಸಿದಳು. 1910ರಲ್ಲಿ ಈಜಿಪ್ಟಿನ ಕಾಯರೋದಲ್ಲಿ ನಡೆದ ಅಂತರಾಷ್ಟ್ರೀಯ ಸಮ್ಮೇಳನದಲ್ಲಿ ಭಾಗವಹಿಸಿದಾಗ ಒಬ್ಬ ಮಹಿಳೆಯೂ ಕಣ್ಣಿಗೆ ಬೀಳಲಿಲ್ಲವಂತೆ! ಆಗ ಸಭೆಯಲ್ಲಿ ಆಕೆ ಎತ್ತಿದ ಪ್ರಶ್ನೆ. 'ಈಜಿಪ್ತ ದೇಶದ ಇನ್ನರ್ಧಭಾಗ ಎಲ್ಲಿದೆ? ಇಲ್ಲಿ ಕೇವಲ ಪುರುಷರನ್ನು ಮಾತ್ರ ಕಾಣುತ್ತಿರೆವನಲ್ಲ?''

1914ರಲ್ಲಿ ಪ್ರಥಮ ಮಹಾಯುದ್ಧ ನಡೆದಾಗ ಮ್ಯಾಡಂ ಕಾಮಾ ಬ್ರಿಟಿಷ್ ಸಮರ ನೀತಿಯನ್ನು ತೀವ್ರ ವಿರೋಧಿಸಿದಳು. ಯುದ್ಧದ ನಿಮಿತ್ತ ಅವ್ಯಾಹತವಾಗಿ ನಡೆಯುತ್ತಿದ್ದ ಭಾರತದ ಆರ್ಥಿಕ ಶೋಷಣೆಯನ್ನು ಪ್ರಬಲವಾಗಿ ಟೀಕಿಸಿದಳು. ಎರಡು ಸಾಮ್ರಾಜ್ಯಗಳ ಹಣಾಹಣಿಯಲ್ಲಿ ಬಡಭಾರತದ ಲೂಟಿ, ಅವಳನ್ನು ತುಂಬ ಕಂಗೆಡಿಸಿತ್ತು.

ಅವಳಿಗೆ ಭಾರತಕ್ಕೆ ಬರಗೊಡದಂತೆ ಮಾಡುವುದರಲ್ಲಿ ಬ್ರಿಟಿಷರು ಯಶಸ್ವಿಯಾಗಿದ್ದರು. ಅವಳ ಕೆಚ್ಚೆದೆ ಹಾಗೂ ಕ್ರಾಂತಿಕಾರಿ ಧೋರಣೆಗಳು ಒಡ್ಡಬಹುದಾದ ಅಪಾಯದ ಅರಿವು ಅವರಿಗಿತ್ತು. ಆದರೆ ಕಾಮಾ ಈಗ ಹಣ್ಣಾಗಿದ್ದಳು. ವಿದೇಶದಲ್ಲಿ ನಡೆದ ಮೂವತ್ತೈದು ವರ್ಷಗಳ ಹೋರಾಟ ಸಾಕಾಗಿತ್ತು. ಕೊನೆಯ ದಿನಗಳಲ್ಲಿ ತಾಯ್ನಾಡಿಗೆ ಬರಲು ನಿರ್ಧರಿಸಿದಳು. ಭಾರತಕ್ಕೆ ಬಂದರೂ ನೇರ ಆಸ್ಪತ್ರೆಗೇ ಸೇರಿಕೊಳ್ಳುವಷ್ಟು ಆರೋಗ್ಯ ಕೆಟ್ಟಿತ್ತು. 1936ರ ಆಗಸ್ಟ್ 13ಕ್ಕೆ ಕೊನೆಯುಸಿರೆಳೆದಳು. ಯುರೋಪ್ ಮತ್ತು ಅಮೇರಿಕಗಳಲ್ಲಿ ಭಾರತೀಯ ಸ್ವಾತಂತ್ರ್ಯ ಹೋರಾಟದ ಕುರಿತ ಜಾಗೃತಿ ಬಿತ್ತಿದ ಮೊದಲಿಗರಲ್ಲಿ ಕಾಮಾ ಪ್ರಮುಖಳು.

★ ★ ★

## ಬರ ಮತ್ತು ವೇಶ್ಯಾವೃತ್ತಿ

*ಪ್ರತಿದಿನ 200 ಹುಡುಗಿಯರು ವೇಶ್ಯಾವಾಟಿಕೆಗೆ ಸೇರುತ್ತಿದ್ದಾರೆ. ಇವರೆಲ್ಲಾ ದೇಶದ ಬರಪೀಡಿತ ಪ್ರದೇಶಗಳಿಂದ ಬಂದವರಾಗಿರುತ್ತಾರೆ, ಎಂದು ರಾಷ್ಟ್ರೀಯ ಮಹಿಳಾ ಆಯೋಗ ತಿಳಿಸಿದೆ. ಗ್ರಾಹಕ ವಸ್ತುಗಳ ಖರೀದಿಗಾಗಿ ಜಾಹಿರಾತು ಕಂಪೆನಿಗಳು ನೀಡುವ ಅತಿರೇಕದ ಪ್ರಚಾರದಿಂದ ಶಾಲಾಮಕ್ಕಳೂ ಪ್ರಭಾವಿತರಾಗುತ್ತಿದ್ದಾರೆ. ಅಂಥ ವಸ್ತುಗಳನ್ನು ತಾವೂ ಹೊಂದಲು ಬಯಸಿ ಅದಕ್ಕಾಗಿ ವೇಶ್ಯಾವಾಟಿಕೆಗಿಳಿಯ ತೊಡಗಿದ್ದಾರೆ ಎಂದು ಆಯೋಗದ ಅಧ್ಯಕ್ಷೆ ವಿಭಾ ಪಾರ್ಥಸಾರಥಿ ವಿಶ್ಲೇಷಿಸಿದ್ದಾರೆ.*

# ಸುಲಭ ಹಣದ ಬೆನ್ನೇರಿದ 'ಗೃಹಿಣಿ'ಯರು

- ಚಂದ್ರ

ಕೊಳ್ಳುಬಾಕ ಸಂಸ್ಕೃತಿಯ ಮೂಲ ಲಕ್ಷಣ 'ಎಷ್ಟಿದ್ದರೂ ಸಾಲದು, ಇನ್ನಷ್ಟು ಬೇಕು, ಮತ್ತಷ್ಟು ಬೇಕು ಎಂಬ ಅಸಾಧ್ಯ ಅತೃಪ್ತಿ'. ಒಂದು ಕಾಲಕ್ಕೆ ಹೊಟ್ಟೆಗಿಲ್ಲದೆ ಬೀದಿಗೆ ಬಿದ್ದ ಹೆಂಗಸರು ವೇಶ್ಯಾವೃತ್ತಿಗೆ ಇಳಿಯುತ್ತಿದ್ದರು. ಇಂದು ಹೊಟ್ಟೆ ತುಂಬಿದ ಶ್ರೀಮಂತ ಮಹಿಳೆಯರು, ಮತ್ತಷ್ಟು ಐಷಾರಾಮವನ್ನು ದೋಚಿಕೊಳ್ಳಲು 'ಪಾರ್ಟ್ ಟೈಂ' ವೇಶ್ಯಾವೃತ್ತಿಗಿಳಿದಿದ್ದಾರೆ. ಶ್ರಮವಿಲ್ಲದೆ, ಹೆಚ್ಚು ಸಮಯ ಹಾಕದೆ ಹೇರಳ ಹಣ ಮಾಡುವ ಸುಲಭ ವಿಧಾನ 'ವೇಶ್ಯಾವೃತ್ತಿ' ಎನಿಸಿದೆ ಈ ಮಹಿಳೆಯರಿಗೆ. ಹಣದ ಮುಂದೆ ಪತ್ನಿಯ ಶೀಲ ಕೂಡಾ ಗಂಡಸರಿಗೆ ಮುಖ್ಯವಾಗಿಲ್ಲ. ಶೇಕಡಾ 25ರಿಂದ 30ರಷ್ಟು ಗಂಡಂದಿರಿಗೆ ತಮ್ಮ ಪತ್ನಿಯರ ಈ 'ವೃತ್ತಿ' ತಿಳಿದಿದೆ. ಕೆಲವರು ತಾವಾಗಿಯೇ ಈ ಹಾದಿಗೆ ಇಳಿಸಿದ್ದಾರೆ. ಸುಮಾರು 25-48 ವಯಸ್ಸಿನ ವಿವಾಹಿತ ಸ್ತ್ರೀಯರು ವೇಶ್ಯಾವೃತ್ತಿಗೆ ಇಳಿದರೆ, 16-22 ವರ್ಷದ ಕಾಲೇಜು ಹುಡುಗಿಯರು ಈ ವೃತ್ತಿಯತ್ತ ಜಾರಿದ್ದಾರೆ. ಇವರೆಲ್ಲ ಮೇಲ್ಮಧ್ಯಮ ವರ್ಗದ ಜುಹು, ನಾರಿಮನ್ ಪಾಯಿಂಟ್, ಬ್ರೀಚ್ ಕ್ಯಾಂಡಿಯಂತಹ ಶ್ರೀಮಂತ ಪ್ರದೇಶದಲ್ಲಿ ವಾಸಿಸುವವರು.

ಮೇಲಿನ ಭೀಕರ ಸತ್ಯಗಳನ್ನು ಹೊರಹಾಕಿದೆ ಮುಂಬಯಿಯ ನ್ಯಾಷನಲ್ ಕಾಲೇಜಿನ ಮನಃ ಶಾಸ್ತ್ರದ ವಿದ್ಯಾರ್ಥಿನಿ ಸಬಾ ನಾರ್ವಲ್ ಅವರ 'ಪ್ರಾಜೆಕ್ಟ್ ರಿಪೋರ್ಟ್'. ಈಕೆ ತನ್ನ ಆನರ್ಸ್ ಪ್ರಾಜೆಕ್ಟ್‌ಗೆ ಆರಿಸಿಕೊಂಡ ವಸ್ತು 'ವೇಶ್ಯಾವೃತ್ತಿಗಿಳಿದ ಗೃಹಿಣಿಯರು ಮತ್ತು ಕಾಲೇಜು ಹುಡುಗಿಯರು'. ಈಕೆ ಮುಂಬಯಿಯ ಶ್ರೀಮಂತ ಗೃಹಿಣಿಯರು ಮತ್ತು ಕಿಶೋರ ಹುಡುಗಿಯರ ಒಳಬದುಕಿನಲ್ಲಿ ಇಣುಕಿ, ಹೊರತಂದದ್ದು ಒಂದು ದಿಟ್ಟ ಮತ್ತು ವಿವಾದಾತ್ಮಕ ಪ್ರಾಜೆಕ್ಟ್.

ಪತ್ರಿಕೆಗಳಲ್ಲಿ ಹೆಚ್ಚು ಹೆಚ್ಚು ವಿವಾಹಿತ ಮಹಿಳೆಯರು, ಕಾಲೇಜು ಹುಡುಗಿಯರು ವೇಶ್ಯಾವಾಟಿಕೆಗೆ ಇಳಿದ ಸುದ್ದಿಗಳು ಸಬಾರನ್ನು ಅಚ್ಚರಿಗೊಳಿಸುತ್ತಿತ್ತು. ಯಾವ ಕಾರಣಕ್ಕೆ ಹೊಟ್ಟೆ, ಬಟ್ಟೆ, ಘನತೆ, ಗೌರವ ಎಲ್ಲಾ ಇರುವ ಈ ಹೆಣ್ಣುಗಳು ದೇಹ ಮಾರಲು ಇಳಿಯುತ್ತಾರೆ ಎಂದು ತಿಳಿಯ ಹೊರಟರು. ಈಕೆಯ ಸಂಬಂಧಿಕರೊಬ್ಬರು ಸಮಾಜ ಸೇವಕರಾಗಿದ್ದದ್ದು ಸಹಾಯಕ್ಕೆ ಬಂದಿತು. ಸುಮಾರು ಮೂವತ್ತು ಮಂದಿ ವಿವಾಹಿತ ಮಹಿಳೆಯರನ್ನು, ಮೂವತ್ತು ಮಂದಿ ಕಾಲೇಜು ಹುಡುಗಿಯರನ್ನು ಸಂದರ್ಶನ ಮಾಡಿ, ಮನಃಶಾಸ್ತ್ರದ ಹಿನ್ನೆಲೆಯಲ್ಲಿ ವಿಶ್ಲೇಷಿಸಲು ಹೊರಟರು. ಆರು ತಿಂಗಳಲ್ಲಿ 200 ಪುಟಗಳ ಇವರ ಪ್ರಾಜೆಕ್ಟ್ ರಿಪೋರ್ಟ್ ಸಿದ್ಧವಾಯಿತು.

ಈ ಮಹಿಳೆಯರು ಕೇವಲ ಹಣಕ್ಕಾಗಿ ಮತ್ತು ಮೋಜಿಗಾಗಿ ತಮ್ಮ ದೇಹ ಮಾರುತ್ತಿರುವುದು ಸಬಾಗೆ ಆಘಾತ ತರಿಸಿತು. ಕೆಲವು ಕೇಸುಗಳಲ್ಲಿ ಪತಿಯೇ ಪತ್ನಿಯನ್ನು ಇಂತಹ ದಂಧೆಗೆ ಇಳಿಸಿದ್ದೂ ತಿಳಿಯಿತು. ಇವರೆಲ್ಲರೂ ಮೇಲ್ಮಧ್ಯಮ ವರ್ಗದ ಶ್ರೀಮಂತ ಕುಟುಂಬದಿಂದ ಬಂದವರು. ಸುಲಭ ರೀತಿಯಲ್ಲಿ ಗಳಿಸಬಲ್ಲ ಹೇರಳ ಹಣ, ಚಟವಾದ ಇವರ ಐಷಾರಾಮದ ಜೀವನಶೈಲಿಗೆ ಅಗತ್ಯವಾಗಿಬಿಟ್ಟಿದೆ. ಒಬ್ಬ ಮಹಿಳೆ ತಾನು ಒಂದು ರಾತ್ರಿಗೆ ಒಂದು ಲಕ್ಷ 'ಚಾರ್ಜ್' ಮಾಡುತ್ತೇನೆ ಎಂದು ಹೇಳಿರುವುದುಂಟು. ಆಕೆ ನೇಪಾಳದ ಮಂತ್ರಿಯೊಬ್ಬರ ಮಾಜಿ ಪತ್ನಿ! ಕಾಲೇಜು ಹುಡುಗಿಯರು ಜೇಬುಖರ್ಚಿಗಾಗಿ ಈ ಕಸಬಿಗೆ ಇಳಿದಿದ್ದಾರೆ. ಶ್ರೀಮಂತ ಮನೆತನದಿಂದ ಬಂದ ಈ ಹುಡುಗಿಯರು ಪ್ರತಿಷ್ಠಿತ ಕಾಲೇಜುಗಳ ವಿದ್ಯಾರ್ಥಿನಿಯರು.

ಅನೇಕ ಗೃಹಿಣಿಯರು ತಮ್ಮ ಮನೆಯಲ್ಲಿಯೇ ದಂಧೆ ಮಾಡುತ್ತಾರೆ. ಪತಿ ಕಛೇರಿಗೆ ಹೋದಾಗ, ಮಕ್ಕಳು ಶಾಲೆಗೆ ಹೋದ ಸಮಯದಲ್ಲಿ. ಕೊಳ್ಳುಬಾಕ ಸಂಸ್ಕೃತಿಯ ವಿಕಾರ ರೂಪವನ್ನು, ಹೊರ ಬೀಳುತ್ತಿರುವ ಈ ವಿಕೃತ ಜೀವನಶೈಲಿಗಳಲ್ಲಿ ಕಾಣಬಹುದು.

ಸಬಾರವರ ಈ ಪ್ರಾಜೆಕ್ಟ್, ದಿಲ್ಲಿಯಲ್ಲಿ ನಡೆದ ಕ್ಲಿನಿಕಲ್ ಸೈಕಾಲಜಿ ಕುರಿತ ರಾಷ್ಟ್ರೀಯ ಸಮ್ಮೇಳನದಲ್ಲಿ ಅತ್ಯುತ್ತಮ ಪೇಪರ್ ಎಂದು ಹೆಸರು ಗಳಿಸಿತು. ಆದರೆ ಮೊದಲಿಗೆ ಪ್ರಾಜೆಕ್ಟ್ ಬಗ್ಗೆಯೇ ನಿರುತ್ಸಾಹ ತೋರಿಸಿದ್ದ ಪ್ರೊಫೆಸರ್, ಈಕೆಯ ಅತಿ ಶ್ರಮದ ಕೆಲಸವನ್ನೆಲ್ಲ ತಮ್ಮದೆಂದು ಸಾರುತ್ತಿರುವುದು ಈ ಕಿಶೋರಿಗೆ ಕಿಡಿ ಕೋಪ ತರಿಸಿದೆ. ಈಕೆಯ ಗೈಡ್ ಡಾ. ಶೈಸಾದ್ ಸುಹೇಲ್, ಸೈಕಾಲಜಿ ವಿಭಾಗದ ಮುಖ್ಯಸ್ಥರು. ರಾಷ್ಟ್ರೀಯ ಸಮ್ಮೇಳನಕ್ಕೆ ಪೇಪರ್ ಕಳುಹಿಸುವಂತೆ ಇವರು ಸಬಾಗೆ ಸಲಹೆ ನೀಡಿದರು. ಪ್ರೊಫೆಸರುಗಳು, ಡಾಕ್ಟರುಗಳು, ವಿದ್ಯಾರ್ಥಿಗಳು ಭಾಗವಹಿಸಿದ ಈ ಸಮ್ಮೇಳನಕ್ಕೆ ಈಕೆಯ ಪೇಪರ್ ಹೋಯಿತು. ಈ ಪ್ರೊಫೆಸರ್ ತಮ್ಮ ಹೆಸರನ್ನು ಮೊದಲು ಬರೆದು, ನಂತರ ಸಬಾರ ಹೆಸರನ್ನು ನಮೂದಿಸಿದ್ದರು. ಮೊದಲ ಲೇಖಕನಿಗೆ ಪೇಪರ್ ಮಂಡಿಸುವ ಅವಕಾಶ ಸಿಗುತ್ತದೆ. ಪೇಪರ್ ಸ್ವೀಕರಿಸಲ್ಪಟ್ಟಿತು. ಪ್ರೊಫೆಸರ್ 'ತಾವು ಹೋಗಿ ಪೇಪರ್ ಮಂಡಿಸಿ ಈ ಪ್ರಾಜೆಕ್ಟ್‌ನ ಕ್ರೆಡಿಟ್ ತೆಗೆದುಕೊಳ್ಳಲು ಬಯಸಿದರು' ಎಂದು ಸಬಾ 'ಸಾವಿ' ಪತ್ರಿಕೆಗೆ ನೀಡಿರುವ ಸಂದರ್ಶನದಲ್ಲಿ ಆರೋಪಿಸಿದ್ದಾರೆ. ಛಲ ಬಿಡದ ಸಬಾ ದಿಲ್ಲಿಯ ಸಮ್ಮೇಳನಕ್ಕೆ ಹೋಗಿ ತಲುಪಿದರೂ, ಅದಾಗಲೆ ಆಕೆಯ ಪ್ರೊಫೆಸರ್ ಬರೆದ 'ಈ ಪ್ರಾಜೆಕ್ಟ್ ತನ್ನದು, ಈ ಹುಡುಗಿ ಅದನ್ನು ಕದ್ದಿದ್ದಾಳೆ' ಎಂಬ ದೂರು ಪತ್ರ ಅಲ್ಲಿಗೆ ತಲುಪಿತ್ತು. ಈಕೆಯ ಪೇಪರ್ 'ಅತ್ಯುತ್ತಮ'ದ್ದೆಂದು ಘೋಷಿಸಲ್ಪಟ್ಟರೂ, ಈಕೆಗೆ ಪ್ರಶಸ್ತಿ ಪತ್ರವಿನ್ನೂ ದೊರೆತಿಲ್ಲ. ಕುಪಿತಳಾದ ಸಬಾ ಪ್ರೊಫೆಸರ್ ಮೇಲೆ ಕೇಸು ಹಾಕಿದ್ದಾಳೆ. ಕೇಸಿನ ಸೋಲು ಗೆಲುವುಗಳೇನೇ ಇರಲಿ, ಸಬಾ ನಮ್ಮ ಸಮಾಜದಲ್ಲಿ ಮುಸುಕಿನಡಿ ನಡೆದು ಸಾಗುತ್ತಿರುವ ವಿಲಕ್ಷಣ ಬದುಕಿನತ್ತ ಬೆಳಕು ಹರಿಸಿದ್ದಾರೆ.

★




## ಹುಡುಗ ನಾ ಹಿಂದೆ ಹೋಗಲಾರೆ

ಮುತ್ತಿನ ಹಾರ ಬೇಕೆ ಬಾಲೇ?
ನಿನ್ನ ನುಡಿಮುತ್ತುಗಳೇ ಮಾಲೆ.

ರೇಶಿಮೆ ಸೀರೆ ನಿನಗಾಗಿ ತಂದೆ.
ಸರಳತೆ ಮೀರೆ, ಪ್ರೀತಿಗಾಗಿ ಬಂದೆ.

ನೀನೇ ನನ್ನ ಚಿನ್ನ ರನ್ನ ತಾರೆ.
ಬೇಡ ಅದೆಲ್ಲ ನಾ ಬರಿ ನಿನ್ನ ನೀರೆ.

ಪ್ರಿಯೆ ನೀನಾದೆ ನನ್ನ ಬಾಳ ಬಟ್ಟೆ.
ಅಂತೆಯೆ ಜಗದ ಜಂಜಾಟ ಬಿಟ್ಟೆ.

ಯಾವ ಲೋಕದ ಕನಸಿದು ಹೇಳು.
ಪ್ರೀತಿ ನಾಕದ ಮನಸಿದು ಕೇಳು.

ಲೋಕ ಸಿಡಿಯಿತು ಒಣ ನೀತಿಗಾಗಿ.
ಮನಸು ಮಿಡಿಯಿತು ಬರಿ ಪ್ರೀತಿಗಾಗಿ.

ಜಾತಿ ಸಂಪ್ರದಾಯಗಳಿವೆಯಲ್ಲ?
ಪ್ರೀತಿ ತ್ಯಾಗ ಭಾವಗಳಿವೆಯಲ್ಲ?

ಹುಡುಗಿ ನಾ ಮುಂದೆ ಸಾಗಲಾರೆ!
ಹುಡುಗ ನಾ ಹಿಂದೆ ಹೋಗಲಾರೆ!!

- ರಂಜಾನ್ ದರ್ಗಾ

## ಅಳಿದ ಗೆಳತಿ

ಯೋಗಕ್ಷ್ಯಾ ರೋಗಕ್ಷ್ಯಾ ಎಣ್ಣೆ
ಸೀಗೆ ಎಂಬ ಅನುಭವದ ವಾಣಿ
ನಿನ್ನಲ್ಲಿ ಸುಳ್ಳಾಯ್ತು. ಅದೆಷ್ಟು
ಸುಳ್ಳು ಸತ್ಯಗಳ ನಡುವೆ
ಬದುಕಿದೆಯೆ ಗೆಳತಿ? ನನ್ನೀಗ
ಕಾಡುತಿದೆ ನಿನ್ನ ಆ ಮಿಥ್ಯೆಗಳು.

ನಗುವ ಕಣ್ಣುಗಳು ಮಂದಹಾಸವ
ಗುತ್ತಿಗೆ ಹಿಡಿದಂಥ ಮುಖಭಾವವ
ಜಗ್ಗಿ ಹಿಡಿದು ಕೇಳಬೇಕಿದೆ ಈಗ
ನೀನಿಲ್ಲಿ ಗಳಿಸಿದ್ದೆಷ್ಟು?
ಉಳಿಸಿದೆಷ್ಟು?

ನಿನ್ನ ಆ ಅಕ್ಷರದ ಕಾರ್ಖಾನೆ?
ನೀ ಬಿತ್ತಿದ ಕನಸುಗಳ,
ನಿಟ್ಟುಸಿರುಗಳ, ಬೆವರುಹನಿಗಳ
ಗುಡಿಸಿ ಎಸೆದಿದೆ ಗೊತ್ತ? ಒಂದು
ಹನಿ 'ಕಂಬನಿ'ಯ ಸುರಿಸದೆ!

ಕವಿಗೋಷ್ಠಿಗಳು ಅಧ್ಯಕ್ಷತೆಯ
ಗಾದಿಗಳು ತುಂಬುತಿವೆ ನಿನ್ನ
ಜೀವದ ಜೀವಗಳು ನಿರಾತಂಕ
ದಿಂದ! ಮತ್ತೆ ಕಾಡುತಿದೆ ಪ್ರಶ್ನೆ

ನಿನ್ನೆಲ್ಲ ತುಂಟತನಗಳ ಇಡಿ
ಯಾಗಿ ಸಹಿಸಿದ ಹಿರಿ ಜೀವಗಳಿಗೆ
ನೀನು ಕೊಟ್ಟಿದ್ದೆಷ್ಟು
ಬಿಟ್ಟಿದ್ದೆಷ್ಟು? ಸರಸಮಯಿ
ನೀಳವೇಣಿ ನನ್ನೊಳಗೆ ಮಾತ್ರ
ನೀನು ಬಿಟ್ಟದಷ್ಟು!

- ಶಾಂತಾನಾಗರಾಜ್

# ಸಮಾಧಾನದ ಸಂಗತಿಗಳು

- *ಹೆಚ್. ಎಸ್. ಗೀತಾ*

ಕುಸುಮ್ ಕೇವಲ 13 ವರ್ಷದ ಬಾಲೆ, ಉತ್ತರ ಪ್ರದೇಶದ ಹಳ್ಳಿಗಾಡಿನವಳು. ಅಂದ ಮೇಲೆ, ಮಾಮೂಲಿ ಕತೆಯೇ ಅನ್ನುತ್ತೀರಾ? ಹೌದು, ಮಾಮೂಲಿ ಕತೆಯೇ. ಎಳೆಯ ವಯಸ್ಸಿನಲ್ಲೇ ಮದುವೆ ಮದುವೆಯಾದಾತ ವಯಸ್ಸಾದವ. ಮೇಲಾಗಿ ಕುಡುಕ, ಕ್ರೂರಿ, ಹೆಂಡತಿಯನ್ನು ಹೊಡೆದು, ಬಡಿದು ಹಿಂಸಿಸುವುದೇ ಅವನ ಪರಮಗುರಿಯಾಗಿತ್ತು. ಅವನ ನಡವಳಿಕೆಯನ್ನು ಅರ್ಥ ಮಾಡಿಕೊಳ್ಳಲಾಗದ ಕುಸುಮಳಿಗೆ ಗೊತ್ತಿದ್ದು ಒಂದೇ ಮೂಗೆತ್ತಿನಂತೆ ದುಡಿಯುವುದು ದೌರ್ಜನ್ಯಗಳನ್ನು ಸಹಿಸುವುದು. ಪ್ರಾಯಶಃ ತಂದೆತಾಯಿ ಕೂಡ ಗಂಡ ಹೇಳಿದಂತೆ ಕೇಳಿಕೊಂಡಿರು ಎಂಬ ವೇದವಾಕ್ಯ ಬೋಧಿಸಿದ್ದಿರಲೇಬೇಕು.

ಕುಸುಮಗಳ ಸಹನೆಯ ಪರೀಕ್ಷೆಯೋ ಅಥವಾ ಅವಳ ಗಂಡನ ಕ್ರೌರ್ಯದ ಪರೀಕ್ಷೆಯೋ - ಅಂತೂ ಹಿಂಸೆ ಮುಂದುವರಿಯಿತು; ಅವಳನ್ನು ಮಾರುವ ಮಟ್ಟದವರೆಗೂ ಹೋಯಿತು. ಕುಸುಮಳನ್ನು ಮಾರಾಟ ಮಾಡಿ ಗಂಡ ತುಸು ಹಣ ಮಾಡಿಕೊಂಡ. ಆದರೆ ಕತೆ ಬೇರೆ ಜಾಡು ಹಿಡಿದದ್ದು ಇಲ್ಲೇ, ಕುಸುಮಳ ತಾಳ್ಮೆಗೂ ಒಂದು ಮುಕ್ತಾಯ ಕಂಡು ಬಂದಿದ್ದು. ಈ ಘಟ್ಟದಲ್ಲಿಯೇ ಖರೀದಿಸಿದವನನ್ನು ಚೆನ್ನಾಗಿ ಥಳಿಸಿ ಆ ಮನೆಯಿಂದ ಹೊರಬಂದಳು. ಹೊರಬಂದು, ಮತ್ತೆ ಹೋದದ್ದಾದರೂ ಎಲ್ಲಿಗೆ ಅನ್ನುತ್ತೀರಾ? ತನ್ನದೇ ಮನೆಗೆ. ಹಿಂಸಿಸಿ, ತನ್ನನ್ನು ಮಾರಾಟ ಮಾಡಿ, ಮನೆಯಿಂದ ಸಾಗಹಾಕಿದ ಗಂಡನ ಮನೆಗೆ! ಕುಸುಮ್ ವಾಪಸು ಹೋದಳು, ಹೀಗೆ ವಾಪಸ್ಸು ಬಂದ ಕುಸುಮಳನ್ನು ಕಂಡು ಎಲ್ಲರೂ ಅವಾಕ್ಕಾದರು. ಏಕೆಂದರೆ ಅವಳು ಮೊದಲಿನ ಕುಸುಮಳಾಗಿರಲಿಲ್ಲ. ಕೆರಳಿದ ಸಿಂಹಿಣಿಯಾಗಿದ್ದಳು. ಅವಳಲ್ಲಿ ಸತ್ತಿದ್ದ ಸ್ವಾಭಿಮಾನ ಎದ್ದು ನಿಂತಿತ್ತು. ಅವಳನು ಎದುರು ಹಾಕಿಕೊಳ್ಳುವ ಧೈರ್ಯವೂ ಯಾರಿಗೂ ಬರಲಿಲ್ಲ. ಆ ಮನೆಯಲ್ಲಿ ತನ್ನ ಹಕ್ಕನ್ನು ಸ್ಥಾಪಿಸಿಕೊಂಡ ಕುಸುಮಳ ಜೀವನ ಅಂದಿನಿಂದ ಬದಲಾಯಿತು. ಕುಸುಮ್ ಈಗ ಶೋಷಿತ ಪತ್ನಿಯಲ್ಲ; ಮೂಗೆತ್ತಿನಂತೆ ದುಡಿಯುವ ಆಳಲ್ಲ. ಸುತ್ತಮುತ್ತಲಿನ ಮಹಿಳೆಯರ ಜೀವನ, ಅವರ ಕಷ್ಟ ಕಾರ್ಪಣ್ಯಗಳನ್ನೂ ಅರಿಯುವುದು ಅದಕ್ಕೆ ಸ್ಪಂದಿಸುವುದೂ ಅವಳ ಕೆಲಸವಾಯಿತು. ಈ ರೀತಿ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುತ್ತ ಕುಸುಮ್ 'ಶಕ್ತಿ ಕೇಂದ್ರ' ಸ್ಥಾಪಿಸಿದಳು. ಹೀಗೆಯೇ ತಾನೇ ತಾನಾಗಿ ಕುಸುಮ್ ಬೆಳೆಯುತ್ತ ಹೋದಳು. ಸಾಮಾಜಿಕ ಕಾರ್ಯಕರ್ತರೊಂದಿಗೆ, ಸರ್ಕಾರೇತರ ಸೇವಾ ಸಂಸ್ಥೆಗಳೊಂದಿಗೆ ಅವಳ ಒಡನಾಟ ಹೆಚ್ಚಿತು.

ಇದೆಲ್ಲ ನಡೆದು ಅನೇಕ ವರ್ಷಗಳುರುಳಿವೆ. ಕುಸುಮ್ ಈಗ 35ರ ಮಹಿಳೆ. ಗ್ರಾಮ ಪಂಚಾಯಿತಿಯಲ್ಲಿ ಸರಪಂಚ್ ಆಗಿದ್ದಾಳೆ. ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಅವ್ಯವಹಾರ ಹಾಗೂ ಭ್ರಷ್ಟಾಚಾರಗಳ ವಿರುದ್ಧ ಅವಳ ಹೋರಾಟ ನಡೆದೇ ಇದೆ; ಆತ್ಮವಿಶ್ವಾಸವು ಬೆಳೆದಿದೆ. ಅದು ಅವಳ ಮಾತುಗಳಲ್ಲೇ ಸ್ಪಷ್ಟವಾಗುತ್ತದೆ - ''ಮಹಿಳೆಯರು ಸಮಸ್ಯೆಗಳನ್ನೂ ತಮ್ಮ ಕೈಗೇ ತೆಗೆದುಕೊಳ್ಳಬೇಕು. ಏಕೆಂದರೆ ಎಷ್ಟೇ ಆದರೂ, ಮಹಿಳೆಯರೇ ಪುರುಷರಿಗಿಂತ ವಾಸಿ, ಬೇರೆಯವರ ಕಷ್ಟನಷ್ಟಕ್ಕೆ ಮನಸ್ಸು ತುಸು ಮಿಡಿಯುತ್ತದೆ. ನಮ್ಮ ಜನಕ್ಕೆ, ಹಳ್ಳಿಗೆ, ಜಿಲ್ಲೆಗೆ, ರಾಜ್ಯಕ್ಕೆ - ದೇಶಕ್ಕಾಗಿ ಕೆಲಸ ಮಾಡಲು ನಾವು ಇಷ್ಟ ಪಡುತ್ತೇವೆ.'' ಕುಸುಮಳನ್ನು ಕುರಿತು ಯೋಚಿಸಿದಾಗ, 'ಪ್ರಾಯಶಃ ಅವಳನ್ನು ಅವಳ ಗಂಡ ಮಾರಿದ್ದೇ ಒಳ್ಳೆಯದಾಯಿತೇನೋ. ಅವಳಲ್ಲಿ ಧೈರ್ಯಛಲ ಮೂಡಿಬಂದವು. ಅವಳ ಕಾರಣದಿಂದ ಮತ್ತೂ ನಾಲ್ವರ ಜೀವನ ಬೆಳಕು ಕಾಣುತ್ತದೆ' ಎಂದೂ ಅನ್ನಿಸುವುದು ಸಹಜವೇ. ಆದರೆ ಎಲ್ಲ ಶೋಷಿತ ಮಹಿಳೆಯರೂ 'ಕುಸುಮ'ರಾಗಲು ಸಾಧ್ಯವಿಲ್ಲವಲ್ಲ?

ಆದರೂ ಮಹಿಳೆಯರ ಕ್ಷೇತ್ರದಲ್ಲಿ ಇದೊಂದು ಸಾಧನೆ ಎಂದೇ ಹೇಳಬೇಕು. ರೂಢಿಗತ ದಾರಿಯನ್ನು ಬಿಟ್ಟು ಹೊಸ ಹಾದಿ ಹಿಡಿಯುವುದು. ಅದೂ ಒಬ್ಬ ಮಹಿಳೆ, ಸಾಮಾನ್ಯ ವಿಷಯವಂತೂ ಖಂಡಿತ ಅಲ್ಲ. ಇಂತಹ ಅಸಾಮಾನ್ಯ ಸಂಗತಿಗಳು ಈಗ ಹೆಚ್ಚುತ್ತಲಿವೆ ಎನ್ನುವುದು ಸಮಾಧಾನದ ವಿಷಯವೇ. ಅದೂ ಉತ್ತರ ಪ್ರದೇಶ - ಬಿಹಾರ್‌ಗಳಂತಹ ರಾಜ್ಯಗಳಲ್ಲಿ ಎಂದರೆ....!!!

ಬಿಹಾರ್ ಎಂದಾಗ ನೆನಪಿಗೆ ಬಂತು. ಇದು ಎಲ್ಲೋ ಓದಿದ ಜೋಕು. ಮುಷರಫ್ ತನ್ನ ಭಾರತ ಭೇಟಿಯ ಸಮಯದಲ್ಲಿ ಅನೇಕ ರಾಜಕೀಯ ಧುರೀಣರನ್ನು ಭೇಟಿಯಾಗುತ್ತಾರೆ. ಬಿಹಾರದ 'ಲಾಲೂ'ವನ್ನು ಸಹ ಭೇಟಿಯಾಗುತ್ತಾರೆ. ಮಾತುಕತೆಯ ಮುಕ್ತಾಯದಲ್ಲಿ ಮುಷರಫ್ 'ಬೇಡ, ನಮಗೆ ಕಾಶ್ಮೀರ ಬೇಡವೇ ಬೇಡ. ನೀವೇ ಇಟ್ಟುಕೊಳ್ಳಿ' ಎಂದು ಹೇಳುತ್ತ ನಿರ್ಗಮಿಸುತ್ತಾರೆ. ಈ ಹಠಾತ್ ಬೆಳವಣಿಗೆಯಿಂದ ವಿಸ್ಮಿತರಾಗುವ ಆಜುಬಾಜಿನ ಜನ ಲಾಲೂವನ್ನು ಮುತ್ತಿಕೊಂಡು 'ಏನಾಯ್ತು' ಲಾಲೂ ಉತ್ತರಿಸುತ್ತಾರೆ- 'ಏನಿಲ್ಲ, ಕಾಶ್ಮೀರದ ಕುರಿತು ಇಷ್ಟೊಂದು ಸಮರಗಳೇಕೆ? ಬೇಶಕ್, ತೆಗೆದುಕೊಳ್ಳಿ. ಆದರೆ ಒಂದು ಷರತ್ತು' ಎಂದು ಹೇಳಿದೆ. ಖುಷಿಯಿಂದ 'ಏನದು ಷರತ್ತು' ಎಂದರು ಆತ. ಜೊತೆಗೆ ಬಿಹಾರವನ್ನೂ ತೆಗೆದುಕೊಳ್ಳಿ' ಎಂದದ್ದಕ್ಕೆ ಆತ ಅಂತರ್ಧಾನರಾಗುವುದೇ?

ಇಂತಹ ಬಿಹಾರದಲ್ಲಿ, ದಲಿತರಿಗೆ ಮುಖ್ಯವಾಗಿ ದಲಿತ ಮಹಿಳೆಯರಿಗೆ ಓಟು ಹಾಕುವ ಅವಕಾಶವೇ ಸಿಕ್ಕಿರಲಿಲ್ಲ. ದಲಿತರು ಓಟು ಹಾಕದಂತೆ ನೋಡಿಕೊಳ್ಳುವುದೇ ಅಲ್ಲಿನ ವ್ಯವಸ್ಥೆಯ ವ್ಯವಸ್ಥೆಯಾಗಿತ್ತು. ಓಟಿನ ಬೂತುಗಳನ್ನು ಮೇಲ್ಜಾತಿಯವರ ಪ್ರದೇಶಗಳಲ್ಲೇ ಇಡಲಾಗುತ್ತಿತ್ತು. ಮೊದಲೇ ನರಮೇಧ ನಡೆಯುವ ರಾಜ್ಯ. ಇನ್ನು ಓಟು ಹಾಕಲಿಕ್ಕಾಗಿ ದಲಿತರು ಅವರ ಆವರಣಕ್ಕೆ ಹೆಜ್ಜೆ ಇಟ್ಟಾರೆಯೆ?

ಇಂತಹ ಬಿಹಾರದಿಂದಲೂ ಆಗೊಮ್ಮೆ ಈಗೊಮ್ಮೆ ಅಚ್ಚರಿಗೊಳಿಸುವ, ಸಮಾಧಾನ ಕೊಡುವಂಥ ಸುದ್ದಿ ಬರುವುದುಂಟು. ಈಗ ಇಲ್ಲಿ ಮಹಿಳೆಯರೂ ಚುನಾವಣೆಗೆ ನಿಲ್ಲುತ್ತಾರೆ; ಅಷ್ಟೇ ಅಲ್ಲ, ಗೆದ್ದು ಬರುತ್ತಾರೆ. ಹೀಗೆಯೇ ಗೆದ್ದು ಬಂದ ಮಹಿಳೆಯೊಬ್ಬಳು ಹೇಳುತ್ತಾರೆ - ''ಇಲ್ಲಿ ದಲಿತರಿಗೆ ಸ್ವಂತಕ್ಕೆ ಒಂದು ತುಣುಕು ಭೂಮಿಯೂ ಸಿಗದು. ಎಲ್ಲವನ್ನೂ ಭೂಮಾಲೀಕರು ಕಬಳಿಸುತ್ತಾರೆ. ನಾನೇ ನಮ್ಮವರನ್ನು ಸಂಘಟಿಸಿ ಈ ಅನ್ಯಾಯವನ್ನು ವಿರೋಧಿಸಲು ಪ್ರಯತ್ನಿಸುತ್ತಿದ್ದೇನೆ. ಈಗ ಪಂಚಾಯತ್ ಚುನಾವಣೆಯಲ್ಲೂ ಗೆದ್ದಿರುವುದರಿಂದ, ನನಗೆ ಸ್ವಲ್ಪ ಮಾನ್ಯತೆಯೂ ಇದೆ. ಇದನ್ನೇ ಆಧಾರವಾಗಿಟ್ಟುಕೊಂಡು ಆರೋಗ್ಯ, ಶಿಕ್ಷಣ ಹಾಗೂ ಇತರ ಸರ್ಕಾರಿ ಸೌಲಭ್ಯಗಳು, ನಮಗೆ ಸಲ್ಲಬೇಕಾಗಿರುವ ಸೌಲಭ್ಯಗಳು ನಮಗೆ ಸಿಗುವಂತಾಗಲು ಪ್ರಯತ್ನಿಸುತ್ತೇನೆ.''

ದಲಿತ ಮಹಿಳೆಯರು ಚುನಾವಣೆಯಲ್ಲಿ ಗೆದ್ದು ಬಂದರೆಂದರೆ ಎಲ್ಲವೂ ಸರಿಯಾಗಿದೆ; ಲಿಂಗಭೇದವಾಗಲೀ ಜಾತಿಭೇದವಾಗಲೀ ತೊಡೆದುಹೋಗಿದೆ ಎಂಬುದಂತೂ ಅಲ್ಲವೇ ಅಲ್ಲ. ಮಹಿಳೆ ಗೆದ್ದು ಬರುವುದಕ್ಕೆ ಕಾರಣ ಆಸ್ಥಾನ ಮಹಿಳೆಗೇ ಮೀಸಲಾಗಿತ್ತು ಅಥವಾ ಆಕೆಯ ಗಂಡ ಹಳ್ಳಿಯಲ್ಲಿ ಏನೋ ಸ್ವಲ್ಪ ಒಳ್ಳೆಯವ ಎನಿಸಿಕೊಂಡಿದ್ದು, ಒಳ್ಳೆಯ ಕೆಲಸ ಮಾಡಿದ್ದ. ಆದರೂ, ಶೇ 33ರ ಮಹಿಳಾ ಮೀಸಲಾತಿ ಪಂಚಾಯತ್ ಮಟ್ಟದಲ್ಲಿ ಲಿಂಗ / ಜಾತಿ ಭೇದಗಳನ್ನು ಹಾದು ಬಂದಿರುವುದು ಸ್ಪಷ್ಟ.

ಇದು ಭ್ರಷ್ಟಾಚಾರ ಬಲವಾಗಿ ಬೇರೂರಿರುವ 'ಬಿಹಾರದ ಸ್ಥಿತಿಯಾದರೆ, ಕೇರಳದ್ದೇ ಬೇರೆ. ಪ್ರಗತಿಯ ಹಾದಿಯಲ್ಲಿ ಕೇರಳದ್ದು ಒಂದು ಹೆಜ್ಜೆ ಮುಂದೆಯೇ. ಸಾರಕ್ಷತೆಯಲ್ಲಿ ಮುಂದಿದೆ. ಜನಸಾಮಾನ್ಯರಿಗೆ ಆರೋಗ್ಯ ಸೌಲಭ್ಯ ಚೆನ್ನಾಗಿದೆ. ಜನಸಂಖ್ಯಾ ಏರಿಕೆ ಕನಿಷ್ಠ ಮಟ್ಟದಲ್ಲಿದೆ. ಮಹಿಳೆಯರಿಗೂ ಶಿಕ್ಷಣ ಸೌಲಭ್ಯ ಚೆನ್ನಾಗಿದೆ. ಅವರೂ ನೌಕರಿ ಮಾಡುತ್ತಾರೆ. ಬೇರೆ ರಾಜ್ಯಗಳಿಗೆ ಹೋಲಿಸಿದರೆ ಎಲ್ಲ ರೀತಿಯಲ್ಲೂ ಸಶಕ್ತರೇ. ಆದರೂ, 'ಇಲ್ಲ, ನಾವು ಸಶಕ್ತರಲ್ಲ. ನಮಗೆ ಅಧಿಕಾರ ಸಿಗುವುದಿಲ್ಲ. ಇಲ್ಲಿನ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಬದಲಾವಣೆಗಳೇನೂ ಆಗಲ್ಲ'' ಎನ್ನುತ್ತಾರೆ ಹಲವು ಮಹಿಳೆಯರು. ರಾಜಕೀಯ ರಂಗದಲ್ಲಿ ಕೇರಳದ ಮಹಿಳೆಯರು ಅಷ್ಟಾಗಿ ಕಾಣಿಸಿಕೊಳ್ಳದಿರುವುದು ಈ ಅಭಿಪ್ರಾಯಕ್ಕೆ ಪುರಾವೆಯಾಗಿಯೂ ಇದೆ.

ಪ್ರಾಯಶಃ ಈ ಅಭಿಪ್ರಾಯ ಇನ್ನು ಮುಂದೆ ಬದಲಾಗಬಹುದೇನೋ. ಈ ಆಶಾವಾದಕ್ಕೆ ಕಾರಣಗಳೂ ಇಲ್ಲದಿಲ್ಲ. ಕೇರಳದ ಮಲ್ಲಪುರಂ ಜಿಲ್ಲೆಯಲ್ಲಿ ಮಹಿಳೆಯರನ್ನು ಪಕ್ಕಕ್ಕೆ ಸರಿಸಿಯೇ ಇಟ್ಟಿದ್ದರು. ಇದು ಮುಸಲ್ಮಾನರೇ ಹೆಚ್ಚಾಗಿರುವ ಪ್ರದೇಶ. ಪಂಚಾಯತ್ ಮಟ್ಟದಲ್ಲಿ ಶೇ 33ರ ಮೀಸಲಾತಿ ಬಂದ ಮೇಲೆ ಇಲ್ಲಿಯೂ ಬದಲಾವಣೆಯ ಗಾಳಿ ಬೀಸಿದೆ. ಇದರ ಪರಿಣಾಮವಾಗಿ 300 ಪಂಚಾಯತ್ ಸದಸ್ಯರ ಪೈಕಿ 100 ಮಂದಿ ಮಹಿಳೆಯರೇ ಆಗಿದ್ದಾರೆ. ಜಿಲ್ಲೆಯ ಶೇ. 25ರಷ್ಟು ಪಂಚಾಯತ್‌ಗಳಲ್ಲಿ ಮುಸಲ್ಮಾನ ಮಹಿಳೆಯರದೇ ನೇತೃತ್ವ; ಐದು ಮುನಿಸಿಪಾಲಿಟಿಗಳ ಪೈಕಿ ಎರಡರಲ್ಲಿ ಮಹಿಳಾ ಚೇರ್‌ಪರ್ಸನ್ ಹಾಗೂ 14 ಬ್ಲಾಕ್ ಪಂಚಾಯತ್‌ಗಳ ಪೈಕಿ ಆರರಲ್ಲಿ ಮುಸಲ್ಮಾನ ಮಹಿಳೆಯರೇ ಅಧ್ಯಕ್ಷರಾಗಿದ್ದಾರೆ. ಜಿಲ್ಲಾ ಪಂಚಾಯತ್ ಕೌನ್ಸಿಲ್‌ನಲ್ಲಿ 30 ಸದಸ್ಯರ ಪೈಕಿ ಏಳು ಮಂದಿ ಮುಸಲ್ಮಾನ ಮಹಿಳೆಯರೇ ಆಗಿದ್ದಾರೆ.

ಈ ಹಿಂದೆ ಮಹಿಳೆಯರು ತಾವಾಗಿ ಹೊರಹೋಗಲು ಸಹ ನಿರ್ಬಂಧವಿತ್ತು. ಆದರೆ ಈಗ ಚುನಾವಣೆಗಳಲ್ಲಿ ಸ್ಪರ್ಧಿಸುತ್ತಾರೆ. ಗೆದ್ದು ಅಧಿಕಾರ ವಹಿಸಿಕೊಳ್ಳುತ್ತಾರೆ ಎನ್ನುವುದು ಅತ್ಯಂತ ಸ್ವಾಗತಾರ್ಹ ಬೆಳವಣಿಗೆ. ಗೆದ್ದು ಬಂದಿರುವ ಈ ಮಹಿಳೆಯರು ತಮ್ಮ ವ್ಯಾಪ್ತಿಗೆ ಬರುವ ಪಂಚಾಯತ್‌ಗಳಲ್ಲಿ ಮಹಿಳೆಯರು ಸಕ್ರಿಯವಾಗಿ ಗ್ರಾಮಸಭೆ ಮುಂತಾದವುಗಳಲ್ಲಿ ಪಾಲ್ಗೊಳ್ಳುವಂತೆ ಮಾಡುತ್ತಾರೆ. ಸಂಪ್ರದಾಯವಾದಿ ಕುಟುಂಬಗಳಿಂದ ಬಂದಂತಹ ಮಹಿಳೆಯರು ಕೂಡ ಗ್ರಾಮ ಪಂಚಾಯತಿಯಲ್ಲಿ ಮಹಿಳಾ ಅಧ್ಯಕ್ಷರಿರುವ ಕಾರಣ ಯಾವುದೇ ಹಿಂಜರಿಕೆಯಿಲ್ಲದೆ ಸಭೆಗಳಲ್ಲಿ ಭಾಗವಹಿಸಲು ಬರುತ್ತಾರೆ. ಸದಸ್ಯರಾಗಿ ಆಯ್ಕೆಯಾಗುವ ಮಹಿಳೆಯರದೂ, ಎಂದಿನಂತೆ, ವಿಭಿನ್ನ ಜವಾಬ್ದಾರಿ ಹೇರುತ್ತಾರೆ.

ತಮ್ಮ ಹೊಸ ಹೊಣೆಯನ್ನು ನಿಭಾಯಿಸುವುದರೊಂದಿಗೆ ಇವರು ಕೌಟುಂಬಿಕ ಸಲಹಾಗಾರರೂ ಆಗುತ್ತಾರೆ; ಕಷ್ಟಸುಖ ನೋಡಿಕೊಳ್ಳುವ ಮಹಿಳೆಯರಿಗೂ ಸ್ಪಂದಿಸುತ್ತಾರೆ. ಚುನಾವಣೆಯಲ್ಲಿ ಆಯ್ಕೆಯಾಗಿರುವ ಮಹಿಳೆಯರಿಗೂ ತಮ್ಮ ಕೆಲಸ ತೃಪ್ತಿ ತಂದಿದೆ, ಆತ್ಮ ವಿಶ್ವಾಸ ಹುಟ್ಟಿಸಿದೆ. ''ಮೀಸಲಾತಿ ಇಲ್ಲದೇ ಹೋಗಿದ್ದರೆ, ನಾನು ಕೇವಲ ಹೆಂಡತಿಯಾಗಿ, ತಾಯಿಯಾಗಿಯೇ ನಾಲ್ಕು ಗೋಡೆಗಳ ಮಧ್ಯೆ ಇರುತ್ತಿದ್ದೆ'' ಎನ್ನುವ ಇವರ ಮಾತಂತೂ ಸತ್ಯ.

ಬಿಹಾರ, ಕೇರಳ ಹಾಗೂ ಉತ್ತರಪ್ರದೇಶದ ಈ ಉದಾಹರಣೆಗಳು ಮಹಿಳಾ ಮೀಸಲಾತಿ ಏಕೆ ಎನ್ನುವವರಿಗೆ ಮೌಲಿಕ ಉತ್ತರವಾಗಿದೆ.

★ ★ ★

# ಪರದೇಶದ ಎರಡು ಘಟನೆಗಳು

ನನ್ನ ಪರಿಚಿತರೊಬ್ಬರು ತಮ್ಮ ಡಾಕ್ಟರ್ ಮಗಳು ಮತ್ತು ಅವಳ ಎರಡು ತಿಂಗಳ ಪುಟ್ಟ ಮೊಮ್ಮಗಳೊಡನೆ ಪರದೇಶಕ್ಕೆ ಹೋದರು. ಅಲ್ಲಿ ಮಗಳು ಮತ್ತು ಅಳಿಯ ಉದ್ಯೋಗಸ್ಥರಾದುದರಿಂದ ಮರುದಿನವೇ ಮಗಳು ಅಳಿಯ ತಮ್ಮ ತಮ್ಮ ಉದ್ಯೋಗಕ್ಕೆ ತೆರಳಿದರು. ಮುಂಬಾಗಿಲು ಭದ್ರಪಡಿಸಿದ ಈಕೆ ಮಗುವಿಗೆ ಸ್ನಾನ ಮಾಡಿಸಲು ತೊಡಗಿದರು. ಮೈಮೇಲೆ ನೀರು ಬಿದ್ದಾಗ ಮಗು ಅಳುವುದು ಸ್ವಾಭಾವಿಕ ಎಂದು ತಾನೆ ನಾವು ಭಾವಿಸುತ್ತೇವೆ. ಇಲ್ಲಿ ಹಾಗಾಗಲಿಲ್ಲ. ಕೆಲವೇ ಕ್ಷಣಗಳಲ್ಲಿ ಕಾಲಿಂಗ್ ಬೆಲ್ ಆಯಿತು. ಮಗುವಿಗೆ ಅರ್ಧ ಸ್ನಾನವಾಗಿದೆ, ಮನೆಯಲ್ಲಿ ಮತ್ತೆ ಯಾರೂ ಇಲ್ಲ. ವಿಧಿಯಿಲ್ಲದೆ ಈಕೆ ಮಗುವನ್ನು ಟವೆಲ್‌ನಲ್ಲಿ ಸುತ್ತಿಕೊಂಡು ಎತ್ತಿಕೊಂಡಂತೇ ಬಾಗಿಲು ತೆರೆದರು. ಹೊರಗೆ ಪೋಲೀಸರು! ಪಕ್ಕದ ಮನೆಯ ಪುಣ್ಯಾತಗಿತ್ತಿ ಇಂಡಿಯಾದ ಬಗ್ಗೆ ಚುರು ಪಾರು ತಿಳಿದವಳು ''ಇಂಡಿಯಾದಲ್ಲಿ ಹೆಣ್ಣು ಮಕ್ಕಳನ್ನು ಹೆರಾಜ್ ಮಾಡುತ್ತಾರೆ ಹಾಗೆ ನಮ್ಮ ಪಕ್ಕದ ಡಾಕ್ಟರ್ ಮಹಿಳೆಯ ಮನೆಗೆ ಒಂದು ಹೆಂಗಸು ಬಂದಿದೆ. ಎಲ್ಲರೂ ಕೆಲಸಕ್ಕೆ ತೆರಳಿದ ನಂತರ ಮಗುವಿಗೆ ನೋವುಂಟು ಮಾಡುತ್ತಿರಬಹುದು ಅದಕ್ಕೇ ಅದು ಸಿಕ್ಕಾಪಟ್ಟೆ ಅಳುತ್ತಿದೆ'' ಎಂದು ಪೋಲೀಸರಿಗೆ ಫೋನಾಯಿಸಿದ್ದಳು. ಪಾಪ ಬೆಂಗಳೂರಿನ ಈ ಅಜ್ಜಿ, ಮಗಳು ಬಂದು ಮಧ್ಯಸ್ಥಿಕೆ ಮಾಡಿದರು ಒಂದುವಾರ ಅದು ಯಾವುದೋ ಸೆಂಟರ್‌ನಲ್ಲಿ ಮಗು ಅಳದಂತೆ ಸ್ನಾನ ಮಾಡಿಸುವುದು ಹೇಗೆ ಎಂದು ಟ್ರೈನಿಂಗ್ ಪಡೆಯಬೇಕಾಯಿತು!!

ಅದೇ ನೆಲದ ಮತ್ತೊಂದು ಘಟನೆ - ನನ್ನ ಮತ್ತೊಬ್ಬ ಪರಿಚಿತೆ ಇದೇ ಪರದೇಶಕ್ಕೆ ಟೂರ್ ಹೋಗಿದ್ದಾಗ ತಮ್ಮ ಗೆಳತಿಯ ಮನೆಯಲ್ಲಿ ಒಂದು ದಿನ ತಂಗಿದ್ದರು. ಮನೆ ಬಹುಮಹಡಿ ಕಟ್ಟಡ. ಮಧ್ಯಾಹ್ನ ಈ ಗೆಳತಿಯರಿಬ್ಬರೂ ಹರಟುತ್ತಿದ್ದಾಗ ಮನೆಯ ಯಜಮಾನ ಏನನ್ನೋ ತರುತ್ತೇನೆಂದು ಹೊರಗೆ ಹೊರಟ ಸ್ವಲ್ಪ ಹೊತ್ತಾಗಿರಬಹುದು ಕಟ್ಟಡದ ಕೆಳಗೆ ಏನೋ ಗಲಾಟೆ ಕೇಳಿಸಿತು. ಈ ಹೆಂಗಸರು ಕೆಳಗೆ ಹೋದರು. ಅಲ್ಲಿ ಈ ಮನೆಯ ಯಜಮಾನ ರಕ್ತದ ಮಡುವಿನಲ್ಲಿ ಬಿದ್ದಿದ್ದಾನೆ 13,14 ವರ್ಷದ ಹುಡುಗಿಯರು ಕೈಗೆ ಸಿಕ್ಕಿದ್ದನ್ನು ತೆಗೆದುಕೊಂಡು ಬಡಿಯುತ್ತಿದ್ದಾರೆ. ನನ್ನ ಪರಿಚಿತೆ ''ಪೋಲೀಸರನ್ನು ಕರೆಯಿರಿ'' ಎಂದು ಜೋರಾಗಿ ಕಿರುಚಿದರೆ ಒಂದು ಹುಡುಗಿಹೇಳಿದಳಂತೆ ''ಏ ಹೆದರ ಬೇಡೀರೇ ನಾವೆಲ್ಲ ಮೈನರ್. ಪೋಲೀಸರು ನಮ್ಮನ್ನೇನೂ ಮಾಡುವ ಹಾಗಿಲ್ಲ'' ಅಲ್ಲಿ ನಡೆದದ್ದೆ ಇಷ್ಟು. ಏನನ್ನೋ ತರುತ್ತೇನೆಂದು ಮನೆಯಿಂದ ಕೆಳಗೆ ಬಂದ ಯಜಮಾನ ಅಲ್ಲಿ ಒಂದು ಹುಡುಗಿ ತನ್ನ ಕಾರನ್ನು ಒಡೆಯುತ್ತಿದ್ದುದನ್ನು ಕಂಡ. ''ಏ ಇದು ನನ್ನ ಕಾರು ಕಾರಣವಿಲ್ಲದೆ ಏಕೆ ಒಡೆಯುತ್ತೀ ಗಾಜು ಒಡೆದರೆ ಏನು ಮಾಲಿ'' ಅಂದ ಅಷ್ಟೇ ಅವಳು ಅವಳ ಗೆಳತಿಯರೂ ''ನಾವು ಥ್ರಿಲ್‌ಗಾಗಿ ಎಲ್ಲ ಕಾರುಗಳನ್ನು ಒಡೆದು ಪಚ್ಚು ಮಾಡುತ್ತಿದ್ದೇವೆ ನೀನು ತಡೆಯಬೇಡ'' ಎಂದು ಕಿರುಚಿ ಆತನನ್ನೇ ಒದ್ದು ಕೆಡವಿದರಂತೆ!!

ಇದೊಂದು ವಿಚಿತ್ರ ದೇಶ. ಇದರ ಹೆಸರು ಅಮೆರಿಕಾ. ಒಂದೆಡೆ ಮಕ್ಕಳನ್ನು ಅಳಿಸಿದರೆ ಶಿಕ್ಷೆ, ಇನ್ನೊಂದೆಡೆ 'ಮೈನರ್'ಗಳು ಏನು ಮಾಡಿದರೂ 'ಬುದ್ಧಿ' ಹೇಳಿ ಬಿಟ್ಟುಬಿಡುವ ಸ್ವಾತಂತ್ರ್ಯ! ಈ ವಿಚಿತ್ರ ಸಂಸ್ಕೃತಿಯನ್ನು ನಮ್ಮ ಪೀಳಿಗೆ ಕಣ್ಣುಮುಚ್ಚಿ ಅನುಸರಿಸುತ್ತಿದೆಯಲ್ಲ? ಇದಕ್ಕೇನನ್ನೋಣ?

# ಪ್ರಪಂಚದ ಕಥೆಗಳು

**ಪ್ರಪಂಚದ ಕತೆಗಳು : ಲೇಖಕಿ ಶ್ರೀಮತಿ ಸರೋಜಾ ನಾರಾಯಣರಾವ್. ಪ್ರಕಾಶಕರು : ಶ್ರೀ ಪ್ರೇಮಸಾಯಿ ಪ್ರಕಾಶನ, ಗುರುಪ್ರಸಾದ, ನಂ. 845, 6ನೇ ಮುಖ್ಯರಸ್ತೆ, ವಿಜಯನಗರ. ಬೆಂ-40. ಪುಟಗಳು-260. ಬೆಲೆ. 70ರೂ.**

ಅಮೆರಿಕಾದಲ್ಲಿ ನೆಲೆಸಿರುವ ಕನ್ನಡ ಲೇಖಕಿ ಶ್ರೀಮತಿ ಸರೋಜಾ ನಾರಾಯಣರಾವ್ ಕನ್ನಡದ ಮಕ್ಕಳಿಗಾಗಿ ಪ್ರಪಂಚದ ಜಾನಪದ ಕಥೆಗಳನ್ನು ಸಂಗ್ರಹಿಸಿ, ಸರಳ ಕನ್ನಡದಲ್ಲಿ ಚಿಕ್ಕ ಚಿಕ್ಕ ಕಥೆಗಳನ್ನೂ ಹೇಳಿದ್ದಾರೆ ಮತ್ತು ಪ್ರತಿಕಥೆಯೂ ಯಾವ ದೇಶದ್ದು ಎಂದೂ ತಿಳಿಸುತ್ತಾರೆ. ಆಚಾರ್ಯ ಬಿ. ಎಂ. ಶ್ರೀರವರೇ ಪ್ರಾರಂಭಿಸಿದ ಇಂಗ್ಲೀಷ್ ಗೀತಗಳು ನಂತರ ಬೇರೆ ಬೇರೆ ಭಾಷೆಯ, ಸಂಸ್ಕೃತಿಯ ಕಥೆ ಗೀತೆಗಳು ಕನ್ನಡಕ್ಕೆ ಬರುತ್ತಿರುವುದು ಹೊಸತಲ್ಲವಾದರೂ ಸರೋಜಾನಾರಾಯಣರಾವ್ ರವರ ಮಕ್ಕಳ ಬಗೆಗಿನ ಕಕ್ಕುಲತೆಯನ್ನು ಮೆಚ್ಚಲೇ ಬೇಕು.

'ಪ್ರಪಂಚದ ಕತೆಗಳು' ವಿನಲ್ಲಿ ಐವತ್ತು ಕತೆಗಳಿವೆ. ಕಥೆಗಳ ಆಯ್ಕೆಯಲ್ಲಿ ಲೇಖಕಿ ಜಾಣ್ಮೆ ತೋರಿದ್ದಾರೆ. ಹತ್ತು-ಹನ್ನೆರಡು ವಯಸ್ಸಿನ ಮಕ್ಕ ಮನಸ್ಸು ಗ್ರಹಿಸಿ ಸುಖಿಸುವಂಥ ಕತೆಗಳೇ ಇವೆ. ಕನ್ನಡವನ್ನೂ ಸ್ವಲ್ಪ ಕಲಿತ ಮಕ್ಕಳೂ ಸುಲಭವಾಗಿ ಓದಬಹುದಾಗಿದೆ. ಪ್ರಕಾಶಕರು ಇನ್ನಷ್ಟು ಮುತುವರ್ಜಿವಹಿಸಿ ಪುಸ್ತಕವನ್ನೂ ಇನ್ನಷ್ಟು ಆಕರ್ಷಣೀಯವಾಗಿಸಿದ್ದರೆ, (ಆಕಾರ, ಚಿತ್ರ ಜೋಡಣೆ ಇತ್ಯಾದಿ) ಮಕ್ಕಳ ಗಮನ ಸೆಳೆಯಲು ಇನ್ನಷ್ಟು ಸಾಧ್ಯವಾಗುತ್ತಿತ್ತು.

ಭಾರತೀಯ ಜಾನಪದ ಕತೆಗಳಲ್ಲಿ ಹೆಣ್ಣು ಅಂದರೆ ಸೌಂದರ್ಯ, ಕೋಮಲತೆ, ಕರುಣೆ, ಮುಗ್ಧತೆ ಅಥವಾ ಸಿಟ್ಟು, ಮಲತಾಯಿ ಮಾಟಗಾತಿಯರಾಗಿ ಕ್ರೌರ್ಯ, ಇಷ್ಟಕ್ಕೆ ಸೀಮಿತವಾಗುತ್ತಾಳೆ. ಶೌರ್ಯ ರಕ್ಷಣೆ ಇತ್ಯಾದಿಗಳಿಗೆ ಗಂಡು ಸದಾ ಪ್ರತೀಕವಾಗುತ್ತಾನೆ.

ಆದರೆ ಶ್ರೀಮತಿ ಸರೋಜಾರವರು ಸಂಗ್ರಹಿಸುವ ಈ ಕತೆಗಳಲ್ಲಿ ಬಹಳ ಭಿನ್ನವಾದ ಆಶಯಗಳಿವೆ, ಇಲ್ಲಿ ಬುದ್ಧಿವಂತ ಹೆಣ್ಣು ಮಕ್ಕಳಿದ್ದಾರೆ, ಇಡೀ ಊರನ್ನೇ ಕ್ಷಾಮದಲ್ಲಿ ಪಾರು ಮಾಡುವ ಹುಡುಗಿಯರು ಸಿಗುತ್ತಾರೆ. ತಮ್ಮ ಪ್ರೀತಿ ಮತ್ತು ಕರುಣೆ ಸ್ವಭಾವದಿಂದ ಸುಂದರ ಬದುಕನ್ನೂ ಕಂಡು ಕೊಳ್ಳುವ ಜಾಣ ಹುಡುಗಿಯರು ಈ ಕತೆಗಳಲ್ಲಿ ಸಿಗುತ್ತಾರೆ. ಜಪಾನ್, ಕೊರಿಯಾ, ಮಯನ್ಮಾರ್ ಪಪುವಾ ನ್ಯೂಗಿನಿ, ಆಫ್ರಿಕಾ ಮುಂತಾದ ದೇಶಗಳ ಕತೆಗಳು ವಿಭಿನ್ನ ಸಂಸ್ಕೃತಿಯನ್ನು ತಿಳಿಸುತ್ತವೆ. ಇದು ಮಕ್ಕಳಿಗೆ ನಿಜವಾಗಿಯೂ ಹೊಸ ಅನುಭವವನ್ನು ಕೊಡುತ್ತದೆ.

ಇಂದು ಕನ್ನಡ ಪುಸ್ತಕವನ್ನು ಓದುವ, ಅಥವಾ ಕನ್ನಡ ಕಥೆಗಳನ್ನು ಕೇಳುವ ಮಕ್ಕಳು ಎಲ್ಲಿ ಸಿಗುತ್ತಾರೆ ಎನ್ನುವ ಪ್ರಶ್ನೆ ಕನ್ನಡದ ಬಗ್ಗೆ ಕಳಕಳಿಯಿರುವವರನ್ನು ಕಾಡುತ್ತಿದೆ. ಇಂಥ ಕತೆಗಳನ್ನು ಶಾಲೆಗಳಲ್ಲಿ ಕಡ್ಡಾಯವಾಗಿ ಓದಿಸುವ ಅಥವಾ ಕೇಳಿಸುವ ಕ್ರಮ ರೂಢಿಯಾದರೆ ಸರೋಜಾರವರ ಶ್ರಮ ಸಾರ್ಥಕವಾದೀತು.

- *ಶಾಂತಾನಾಗರಾಜ್*

# ಕರ್ನಾಟಕ ಶಾಲಾ ದತ್ತು ಯೋಜನೆ

ದಾನಿ ಬಂಧುಗಳೇ,

ನಾವು ರಾಜ್ಯದಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ಮಕ್ಕಳ, ಅವರು ಕಲಿಯುತ್ತಿರುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳನ್ನು ದತ್ತು ತೆಗೆದುಕೊಂಡು ಅಭಿವೃದ್ಧಿಗೊಳಿಸುವ ಸಲುವಾಗಿ ಸರ್ಕಾರದೊಂದಿಗೆ ಸಮನಾಗಿ ಪಾಲ್ಗೊಳ್ಳಲು ಆಸಕ್ತಿಯುಳ್ಳ ಮತ್ತು ಇಚ್ಛಿಸುವ ಉದ್ಯಮ ಸಂಸ್ಥೆಗಳು / ಟ್ರಸ್ಟ್‌ಗಳು ಸರ್ಕಾರೇತರ ಸಂಸ್ಥೆಗಳು ಮತ್ತು ದಾನಿಗಳ ಸಹಕಾರ ಸರ್ಕಾರ ಬಯಸಿದೆ. ಈ ಕಾರ್ಯಕ್ರಮದಡಿಯಲ್ಲಿ ದತ್ತು ತೆಗೆದುಕೊಳ್ಳುವವರು ಅವರು ಇಚ್ಛಿಸುವ ಒಂದು ಶಾಲೆ ಅಥವಾ ಶಾಲೆಗಳನ್ನು ಆಯ್ಕೆಮಾಡಿಕೊಂಡು ಈ ಶಾಲೆ / ಶಾಲೆಗಳ ಎಲ್ಲಾ ತರಹ (ಸರ್ವತೋಮುಖ) ಅಥವಾ ಯಾವುದೇ ಅಂಶಗಳ ಯೋಜನೆಗಳನ್ನು ಅಳವಡಿಸಬಹುದಾಗಿದೆ. ಇದಲ್ಲದೆ ಗ್ರಾಮ ಪಂಚಾಯತ್ ಅಥವಾ ಬ್ಲಾಕ್ ಅಥವಾ ಜಿಲ್ಲೆಯಲ್ಲಿ ಪ್ರತ್ಯೇಕವಾದ ಸ್ಥಳವನ್ನು ಆಯ್ಕೆಮಾಡಿಕೊಂಡು ಆ ಕ್ಷೇತ್ರದಲ್ಲಿ ಎಲ್ಲಾ ಮಕ್ಕಳಿಗೆ ಗುಣಮಟ್ಟದ ವಿದ್ಯಾಭ್ಯಾಸ ನೀಡಲು ಶ್ರಮಿಸಬಹುದಾಗಿದೆ. ಇದಕ್ಕಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯು ದತ್ತು ತೆಗೆದುಕೊಳ್ಳುವವರೊಂದಿಗೆ ಒಪ್ಪಂದ ಮಾಡಿಕೊಳ್ಳುತ್ತದೆ ಮತ್ತು ದತ್ತು ತೆಗೆದುಕೊಳ್ಳುವವರ ಪೂರ್ಣ ಸಹಕಾರದೊಂದಿಗೆ ಕಾರ್ಯನಿರ್ವಹಿಸಲು ಬದ್ಧವಾಗುತ್ತದೆ. ಆಸಕ್ತ ಉದಾರಿಗಳು ನೆರವು ನೀಡಬಹುದಾದ ಚಟುವಟಿಕೆಗಳ ವಿವರ ಮಾಹಿತಿ ಇಂತಿದೆ:

1. *ವಿದ್ಯಾರ್ಥಿ ಹಾಗೂ ವಿದ್ಯಾರ್ಥಿನಿಯರಿಗೆ ಪ್ರತ್ಯೇಕ ನೀರು ಮತ್ತು ಶೌಚಾಲಯ ಸೌಲಭ್ಯ.*
2. *ಶಾಲಾ ಕಟ್ಟಡದ ನಿರ್ಮಾಣ, ನವೀಕರಣ.*
3. *ಶಾಲಾ ಆವರಣಕ್ಕೆ ಗೋಡೆ ಅಥವಾ ತಂತಿ ಬೇಲಿ ಹಾಕುವುದು, ಶಾಲೋದ್ಯಾನ ನಿರ್ಮಿಸುವುದು.*
4. *ಪಾಠೋಪಕರಣ ಮತ್ತು ಮತ್ತು ಪೀಠೋಪಕರಣಗಳನ್ನು ನೀಡುವುದು.*
5. *ಕಂಪ್ಯೂಟರ್ ದೇಣಿಗೆ ಅಥವಾ ಕಂಪ್ಯೂಟರ್ ಶಿಕ್ಷಣ ನೀಡುವಲ್ಲಿ ಆರ್ಥಿಕ ಸಹಾಯ.*
6. *ಪ್ರಯೋಗ ಶಾಲೆ ಮತ್ತು ಗ್ರಂಥಾಲಯಗಳನ್ನು ಅಭಿವೃದ್ಧಿ ಪಡಿಸುವುದು.*
7. *ಶಾಲಾ ಕ್ರೀಡಾಂಗಣ ಅಥವಾ ಆಟದ ಮೈದಾನವನ್ನು ಅಭಿವೃದ್ಧಿ ಪಡಿಸುವುದು, ಕ್ರೀಡೋಪಕರಣಗಳನ್ನು ನೀಡುವುದು.*
8. *ಶಿಕ್ಷಕರಿಗೆ ಶೈಕ್ಷಣಿಕ ಮಾರ್ಗದರ್ಶನ ಮತ್ತು ಸೇವಾ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿ ಕೊಳ್ಳುವುದು.*
9. *ವಿದ್ಯಾರ್ಥಿಗಳಿಗೆ ಕರಕುಶಲ ನೀಡುವ ತರಬೇತಿಗಳು, ವ್ಯಕ್ತಿತ್ವ ವಿಕಸನ ಕಾರ್ಯಕ್ರಮಗಳನ್ನು ಹಮ್ಮಿ ಕೊಳ್ಳುವುದು.*
10. *ವಿದ್ಯಾರ್ಥಿಗಳಿಗೆ / ಶಿಕ್ಷಕರಿಗೆ ಶೈಕ್ಷಣಿಕ ಪ್ರವಾಸಗಳನ್ನು ಏರ್ಪಡಿಸುವುದು.*
11. *ಹೆಣ್ಣು ಮಕ್ಕಳನ್ನು, ಪರಿಶಿಷ್ಟಜಾತಿ, ಪಂಗಡದ ಮಕ್ಕಳನ್ನು ದತ್ತು ತೆಗೆದುಕೊಳ್ವುದು ಮತ್ತು ಅವರ ಸರ್ವತೋಮುಖ ಬೆಳವಣಿಗೆಯಲ್ಲಿ ಪಾಲ್ಗೊಳ್ಳುವುದು.*
12. *ಶಾಲೆಗಳಲ್ಲಿ ಏರ್ಪಡಿಸುವ ಸಾಂಸ್ಕೃತಿ, ಶೈಕ್ಷಣಿಕ, ವಿಜ್ಞಾನ ಕಾರ್ಯಕ್ರಮಗಳು, ಪ್ರದರ್ಶನ ಇತ್ಯಾದಿ ಹಮ್ಮಿ ಕೊಳ್ಳುವುದು.*
13. *ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನಗಳನ್ನು ನೀಡುವುದು.*
14. *ವಿದ್ಯಾರ್ಥಿಗಳಿಗೆ ಮಧ್ಯಾಹ್ನದ ಉಪಹಾರಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.*
15. *ಶಾಲೆಯ ಹತ್ತಿರದಲ್ಲಿರುವ ಕೊಳಚೆ ಪ್ರದೇಶಗಳನ್ನು ದತ್ತು ತೆಗೆದುಕೊಳ್ಳುವುದು.*
16. *ಶಾಲೆಯ ಪಠ್ಯೇತರ ಚಟುವಟಿಕೆಗಳ ಅಂಗವಾಗಿ ವೃತ್ತಿ ಶಿಕ್ಷಣ ಕಾರ್ಯಕ್ರಮಗಳನ್ನು ಹಮ್ಮಿ ಕೊಳ್ಳುವುದು.*
17. *ತಬ್ಬಲಿ ಮಕ್ಕಳನ್ನು ದತ್ತು ತೆಗೆದುಕೊಳ್ಳುವುದು.*
18. *ಶಾಲೆಯ ಪಠ್ಯೇತರ ಚಟುವಟಿಕೆಯ ಅಂಗವಾಗಿ ಯಾವುದಾದರೂ ಕೆಲವು ಕಾರ್ಯಕ್ರಮಗಳನ್ನು ಏರ್ಪಡಿಸುವುದು. ಎನ್.ಸಿ.ಸಿ., ವಿಜ್ಞಾನ ಸಂಘ, ಸ್ಕೌಟ್ಸ್ ಮತ್ತು ಗೈಡ್ ಸೇವಾದಳ, ಜೂನಿಯರ್ ರೆಡ್‌ಕ್ರಾಸ್, ಪರಿಸರ ಶಿಬಿರ ಇತ್ಯಾದಿ.*
19. *ಶಾಲೆಯಲ್ಲಿ ಬಾಲವಾಡಿಗಳನ್ನು ನಡೆಸುವುದು.*
20. *ಬಡತನ ರೇಖೆಗಿಂತ ಕೆಳಗಿರುವ ಮಕ್ಕಳ ಸರ್ವಾಂಗೀಣ ಅಭಿವೃದ್ಧಿ, ಅವರಿಗೆ ವಿಶೇಷ ತರಬೇತಿ ಯೋಜನಾ ಕಾರ್ಯಕ್ರಮಗಳು ಇತ್ಯಾದಿ.*
21. *ಪೋಷಕರನ್ನು ಕರೆದು ಅವರನ್ನು ಶಾಲಾಭಿವೃದ್ಧಿ ಕಾರ್ಯಕ್ರಮಗಳಲ್ಲಿ ತೊಡಗುವಂತೆ ಪ್ರೇರೇಪಿಸುವುದು.*

**ಈ ಯೋಜನೆಯ ಪೂರ್ಣ ವಿವರಗಳನ್ನು www.kar.inc.in/cpi ಇಂಟರ್‌ನೆಟ್ ವಿಳಾಸದಲ್ಲಿ ಅಥವಾ ಕೆಳಗೆ ಸೂಚಿಸಿರುವ ದೂರವಾಣಿ ಸಂಖ್ಯೆ / ಇ-ಮೈಲ್ ಸಂಪರ್ಕಿಸಿ ಪಡೆಯುವಂತೆ ದಾನಿ / ಸಂಸ್ಥೆಗಳಲ್ಲಿ ಮನವಿ ಮಾಡುತ್ತೇವೆ.**

1. **ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ**
   ದೂರವಾಣಿ : 2214350 ಫ್ಯಾಕ್ಸ್ : 2211086
   e-mail : cpi@cpikar.kar.mic.in
2. **ನಿರ್ದೇಶಕರು, ಪ್ರೌಢಶಿಕ್ಷಣ**
   ದೂರವಾಣಿ : 2212873
   e-mail : dpisec@cpikar.kar.nic.in
3. **ನಿರ್ದೇಶಕರು, ಪ್ರಾಥಮಿಕ ಶಿಕ್ಷಣ**
   ದೂರವಾಣಿ : 2210117
4. **ಸಾರ್ವಜನಿಕ ಸಂಪರ್ಕಾಧಿಕಾರಿ**
   ದೂರವಾಣಿ : 2246976
5. **ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು**
6. **ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳು**

# ಆಸ್ತಿಯ ಪ್ರಶ್ನೆ

ಬದುಕಿನಲ್ಲಿಯೂ, ಸತ್ತನಂತರವೂ ದಂತಕಥೆಯಾದವಳು ಫೂಲನ್‌ದೇವಿ. ಫೂಲನ್‌ಳ ಸಾವು ಅವಳ ಬದುಕಿನ ಹಲವು ಮಗ್ಗುಲಗಳನ್ನು ತೆರೆದಿಟ್ಟಂತೆ, ಹಲವಾರು ಪ್ರಶ್ನೆಗಳನ್ನು ನಮ್ಮ ಮುಂದಿಡುತ್ತಿದೆ. ಅದರಲ್ಲಿ ಬಹುಮುಖ್ಯವಾದದ್ದು ಹೆಣ್ಣು ಮತ್ತು ಆಸ್ತಿಯ ಸಂಬಂಧವನ್ನು ಕುರಿತ ಪ್ರಶ್ನೆ ಅತ್ಯಂತ ಗಂಭೀರ ಸ್ವರೂಪದ್ದು.

ಡಕಾಯಿತ ರಾಣಿಯು ಮಾಧ್ಯಮದವರ ರಾಜಕಾರಣಿಗಳ, ಅವಳ ಗಂಡನ, ಕೊನೆಗೆ ಒಡಹುಟ್ಟಿದವರಿಗೆ ಹೇಗೆ ಆಸ್ತಿಯಾದದ್ದು ನಮಗೆಲ್ಲಾ ತಿಳಿದಿದೆ. ಅವಳ ಸಾವಿನ ನಂತರವೂ ಇದೇ ಜನ ಫೂಲನ್‌ಳ ಹೆಸರಿನಲ್ಲಿ ಕಚ್ಚಾಡುತ್ತಿದ್ದಾರೆ. ಅವಳನ್ನು ಆಸ್ತಿಯಾಗಿ ಬಳಸಿಕೊಂಡ ಜನವೇ ಸಾವಿನನಂತರ ಅವಳ ಆಸ್ತಿಯತ್ತ ಕಣ್ಣುನೆಟ್ಟು ಅದನ್ನು ತಮ್ಮ ನಿಯಂತ್ರಣಕ್ಕೆ ತೆಗೆದುಕೊಳ್ಳಲು ಹೋರಾಡುತ್ತಿದ್ದಾರೆ. ಫೂಲನ್‌ಳ ದುರಂತ ಸಾವು ಅವಳು ಮಾಧ್ಯಮದಲ್ಲಿ ನಿರಂತರವಗಿ ಸುದ್ದಿಯ ವಸ್ತುವನ್ನಾಗಿಸಿದೆ.

ಫೂಲನ್ ಬಿಟ್ಟು ಹೋಗಿರುವ 10 ಕೋಟಿ ರೂಪಾಯಿಗಳನ್ನು ಈಗ ಯಾರು ಹೊಂದುತ್ತಾರೆ? ಈಗಾಗಲೇ ವಿವಾದದಲ್ಲಿರುವಂತೆ ಅವಳ ಗಂಡ ಆ ಹಣವನ್ನು ಹೊಂದುವುದು ಅವಳಿಗೆ ಇಷ್ಟವಿರಲಿಲ್ಲವೇ? ಅವಳ ತಂಗಿಯರು ಮತ್ತು ತಾಯಿಯರ ಪಾತ್ರವೇನು? ವಿಲ್ ಬರೆಯದೆ ಅಪಾರ ಹಣದ ಒಡತಿಯಾಗಿ ಸಾವನ್ನಪ್ಪಿರುವ ಫೂಲನ್‌ಳ ಬದುಕು ಈ ರೀತಿಯ ಪ್ರಶ್ನೆಯನ್ನು ಎತ್ತಬಹುದಾದರೆ, ಇದೇ ಪ್ರಶ್ನೆ ಇಂದು ಭಾರತದ ಹಲವಾರು ಮಹಿಳೆಯರ ಪ್ರಶ್ನೆಯೂ ಆಗುತ್ತದೆ.

ಅಕ್ಷರಸ್ಥೆಇರಲಿ ಅಥವಾ ಅನಕ್ಷರಸ್ಥಳಾಗಿರಲಿ. ಇಂದು ಭಾರತೀಯ ಹೆಣ್ಣು ಆಸ್ತಿಯ ಹಕ್ಕಿನ ಬಗ್ಗೆ ತಿಳುವಳಿಕೆ ಹೊಂದಿರುವುದು ಕಡಿಮೆಯೇ. ಬದುಕಿರುವಾಗಲೂ ಅವರ ಸ್ವಂತ ಆಸ್ತಿಯ ನಿರ್ವಹಣೆಯ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಳ್ಳುವುದಿಲ್ಲ. ಹಾಗೆಯೇ ದಿಢೀರನೆ ಸಾವನ್ನಪ್ಪಿದಾಗ ವಿಲ್ ಗೈರು ಹಾಜರಿಯಲ್ಲಿ ಅವರ ಆಸೆಗಳೂ ಹಾಗೆಯೇ ಸತ್ತುಹೋಗುತ್ತವೆ. ಫೂಲ್‌ನಳ ಆಸ್ತಿಗಾಗಿ ಸಾರ್ವಜನಿಕವಾಗಿ ನಡೆಯುತ್ತಿರುವ ಯುದ್ಧ ಇಂದು ಭಾರತೀಯ ಹೆಣ್ಣಿನ ಆಸ್ತಿಯ ಹಕ್ಕಿನ ಬಗ್ಗೆ ಹಲವಾರು ಪ್ರಶ್ನೆಗಳನ್ನು ನಮ್ಮ ಮುಂದಿಡುತ್ತದೆ. ಬದುಕಿರುವಾಗಲೇ ಭಾರತೀಯ ಹೆಣ್ಣು ತನಗೆ ಹಕ್ಕಿನಿಂದ ಬರಬೇಕಾದ ಆಸ್ತಿಯಿಂದ ವಂಚಿತಳಾಗಿದ್ದಾಳೆ. ಈ ಸಂಬಂಧವಾಗಿ ಮಹಾರಾಷ್ಟ್ರ ಸರ್ಕಾರವು ಒಳ್ಳೆಯ ಪ್ರಯೋಗವನ್ನು ಮಾಡಲು ಉದ್ದೇಶಿಸಿದೆ. ಮಹಿಳೆಯರ ಕಾನೂನುಬದ್ಧ ಹಕ್ಕುಗಳಿಗಾಗಿ ದುಡಿಯುತ್ತಿರುವ 'ಮಜಲಿ' ಸಂಘಟನೆಯನ್ನು ಮಹಾರಾಷ್ಟ್ರ ಸರ್ಕಾರವು ಮಹಿಳೆಯರ ಆಸ್ತಿಯ ಹಕ್ಕನ್ನು ಕುರಿತಂತೆ ಮಸೂದೆಯೊಂದನ್ನು ಸಿದ್ಧಪಡಿಸಲು ಕೇಳಿಕೊಂಡಿದೆ. ವಕೀಲರು, ನ್ಯಾಯಮೂರ್ತಿಗಳು ಮತ್ತು ಮಹಿಳಾ ಸಂಘಟನೆಗಳ ಸಲಹೆಗಳನ್ನು ಈ ಮಸೂದೆಯ ಸಂದರ್ಭದಲ್ಲಿ ಅಳವಡಿಸಿಕೊಳ್ಳಲಾಗುತ್ತಿದೆ.

ಸದ್ಯದಲ್ಲಿ ಜಾರಿಯಲ್ಲಿರುವ ಹಿಂದೂ ಸಕ್ಸೆಷನ್ ಕಾಯಿದೆಯಲ್ಲಿರುವ ಪಿತ್ರಾರ್ಜಿತ ಆಸ್ತಿಯ ಹಕ್ಕಿನಲ್ಲಿ ಎಷ್ಟೇ ನ್ಯೂನತೆಗಳಿದ್ದರೂ ಮಹಾರಾಷ್ಟ್ರ, ಕರ್ನಾಟಕ, ಆಂಧ್ರಪ್ರದೇಶ ಮತ್ತು ತಮಿಳುನಾಡು ರಾಜ್ಯಗಳಲ್ಲಿ ಹೆಣ್ಣಿಗೆ ಆಸ್ತಿಯ ಹಕ್ಕಿನಲ್ಲಿ ಅಧಿಕಾರವಿದೆ. ತವರಿನಲ್ಲಿ ಹುಟ್ಟಿದ ಕಾರಣಕ್ಕೆ ಆಸ್ತಿಯನ್ನು ಹೊಂದುವ ಹಕ್ಕು ಈ ರಾಜ್ಯಗಳಲ್ಲಿ ಮಹಿಳೆಯರಿಗಿದೆ. ಆದರೆ ಆ ಹಕ್ಕಿನ ಬಗೆಗಿನ ಜಾಗೃತಿ ಮತ್ತು ಪಡೆಯುವ ಇಚ್ಛೆ ಮತ್ತು ಸ್ವಾತಂತ್ರ್ಯ, ಈ ಮಹಿಳೆಯರಿಗೆಷ್ಟು ಇದೆ ಎಂಬುದನ್ನು ವಸ್ತು ಸ್ಥಿತಿಯೇ ಹೇಳಬೇಕು. ಆದರೆ ದೇಶದ ಉಳಿದ ರಾಜ್ಯಗಳಲ್ಲಿರುವ ಮಹಿಳೆಯರಿಗೆ ಇಂತಹ ಕಾನೂನಿನ ಸೌಲಭ್ಯದ ಅರಿವಾಗಲೀ, ಅದಕ್ಕೆ ಬೇಕಾದ ಹೋರಾಟದ ಅಗತ್ಯವೂ ಇನ್ನೂ ಮೂಡಬೇಕಾಗಿದೆ.

ನ್ಯಾಯಮೂರ್ತಿ ಚಂದ್ರಚೂಡ್‌ರವರು ಅಭಿಪ್ರಾಯ ಪಡುವಂತೆ ಹೆಣ್ಣು ತಾಯಿಯ ಮನೆಯ ಆಸ್ತಿಯಷ್ಟೇ ಅಲ್ಲ, ಗಂಡನ ಮನೆಯ ಆಸ್ತಿಗೂ ಸಮಾನವಾಗಿ ಹಕ್ಕುದಾರಳಾಗುವಂತಹ ಕಾನೂನಿನ ಜಾರಿಯ ಅಗತ್ಯವಿದೆ. ಮಹಾರಾಷ್ಟ್ರದ ವಕೀಲೆ ಮತ್ತು ಸಾಮಾಜಿಕ ಕಾರ್ಯಕರ್ತೆ ಫ್ಲೇವಿಯಾ ಆ್ಯಗ್ನೇಸ್ ಹೇಳುವಂತೆ ಕಳೆದ ಒಂದು ದಶಕದಲ್ಲಿ ಕೌಟುಂಬಿಕ ಹಿಂಸೆಯಿಂದ ನರಳುತ್ತಿರುವ ಮಹಿಳೆಯರ ಸ್ಥಿತಿಗತಿಗಳನ್ನು ಗಮನಿಸಿದರೆ ವಿವಾಹದ ನಂತರದಲ್ಲಿ ಗಂಡನ ಮನೆಯ ಆಸ್ತಿಗೆ ಸಂಬಂಧಪಟ್ಟಂತೆ ಹೆಣ್ಣಿಗೆ ಭದ್ರತೆ ನೀಡುವ ಕಾನೂನುಗಳು ಸಾಕಷ್ಟು ಇಲ್ಲ.

ಇಂದು ಬಡವರಲ್ಲಿ ಬಹಳಷ್ಟು ಕುಟುಂಬಗಳಿಗೆ ಮಹಿಳೆಯರೇ ಒಡೆಯರಾಗಿರುತ್ತಾರೆ. ಅವರೇ ದುಡಿದು ಕುಟುಂಬವನ್ನು ನಡೆಸುತ್ತಿರುತ್ತಾರೆ. ಅಂತಹ ಸಂದರ್ಭದಲ್ಲಿ ಅವರಿಗೆ ಅವರ ದುಡಿಮೆಯ ಹಾಗೂ ಆಸ್ತಿಯ ಹಕ್ಕನ್ನು ಕಾನೂನು ಮನ್ನಿಸದಿದ್ದರೆ ಅದು ಘೋರ ಅಪರಾಧವಾಗುತ್ತದೆ. ಕುಡಿತ, ದುರ್ವ್ಯಸನಗಳಲ್ಲಿ ಮುಳುಗಿರುವ ಗಂಡಂದಿರ ದೌರ್ಜನ್ಯದಿಂದ ಹೆಣ್ಣು ಕುಟುಂಬ ತೊರೆದು ಹೊರಗೆ ಬಂದಾಗ ತಮ್ಮ ಆಸ್ತಿಯ ಮೇಲಿನ ಹಕ್ಕು ಇಲ್ಲದಿದ್ದರೆ ಅನ್ಯಾಯವಾಗುತ್ತದೆ.

'ಆಸ್ತಿ'ಯ ಪರಿಕಲ್ಪನೆಯೇ ಅತ್ಯಂತ ಸಂಕೀರ್ಣವಾದುದು. ಅದರಲ್ಲಿ 'ಮಹಿಳೆಯ ಆಸ್ತಿಯ ಹಕ್ಕು' ಇನ್ನೂ ಸಂಕೀರ್ಣವೂ, ವಿವಾದಾಸ್ಪದವಾದ ವಿಷಯ. ಫೂಲನ್‌ದೇವಿಯ ಆಸ್ತಿಯ ಭವಿಷ್ಯ ಏನಾಗಬಹುದು, ಎಂಬ ಸಂಗತಿ, ಇಂದು ನಮ್ಮ ಮಹಿಳೆಯರ ಆಸ್ತಿಯ ಹಕ್ಕಿನ ಅಗತ್ಯದ ಬಗ್ಗೆ ಯೋಚಿಸುವಂತೆ ಮಾಡುತ್ತದೆ.

★ ★ ★

# ಮಹಿಳೆ ಮತ್ತು ಕೋಮುವಾದ

ಕೋಮು ಗಲಭೆಗಳಲ್ಲಿ ಅತ್ಯಂತ ನೋವಿಗೀಡಾಗುವವರು ಮಹಿಳೆಯರು, ಕಾರಣ ಅವರೇ ಎಲ್ಲ ರೀತಿಯಲ್ಲೂ ದೌರ್ಜನ್ಯಕ್ಕೆ ಒಳಗಾಗುವ ಸಾಧ್ಯತೆಗಳಿವೆ. ಏಕೆಂದರೆ ಅವರ ಪುರುಷ ಸಂಬಂಧಿಗಳು ಕೊಲೆಯಾಗುತ್ತಾರೆ, ಮಕ್ಕಳನ್ನು ಕಳೆದುಕೊಳ್ಳುತ್ತಾರೆ. ಇಲ್ಲವೇ ಅವರೇ ಅಪಹರಣಕ್ಕೊಳಗಾಗುತ್ತಾರೆ ಮತ್ತು ಅತ್ಯಾಚಾರಕ್ಕೆ ಗುರಿಯಾಗುತ್ತಾರೆ. ಹೀಗೆಂದು ಹೇಳುವುದು ಕೋಮುವಾದ ಮತ್ತು ಮಹಿಳೆಯನ್ನು ಕುರಿತ ಚಿಂತನೆಗಳಲ್ಲಿ ಸರ್ವೇಸಾಮಾನ್ಯ. ಮಹಿಳೆಯರೆಂದೂ ಬೇರೆಯವರನ್ನು ಕೊಲ್ಲಲು ಹೋಗುವುದಿಲ್ಲ; ಪ್ರಜ್ಞಾಪೂರ್ವಕವಾಗಿ ಹಿಂಸೆಯಲ್ಲಿ ತೊಡಗುವುದಿಲ್ಲ. ಅದರ ಬದಲಿಗೆ, ಒಡೆದ ಮನಸ್ಸುಗಳನ್ನು, ಸಂಬಂಧಗಳನ್ನು ಕೂಡಿಸುವ ಪ್ರಯತ್ನ ಮಾಡುತ್ತಾರೆ. ಮುರಿದ ಸಮುದಾಯವನ್ನು ಪುನರ್ರಚಿಸುತ್ತಾರೆ. ಎಂಬುದು ಇತ್ತೀಚಿನ ತಿಳುವಳಿಕೆ. (ಊರ್ವಶಿ ಬೂಟಾಲಿಯಾ)

ಸ್ವತಂತ್ರ ಭಾರತದಲ್ಲಿ ಎಪ್ಪತ್ತು ಮತ್ತು ಎಂಭತ್ತರ ದಶಕದಲ್ಲಿ ಮಹಿಳಾ ಚಳುವಳಿಯು ಕೈಗೆತ್ತಿಕೊಂಡ ಸಮಸ್ಯೆಗಳೆಂದರೆ, ಕುಟುಂಬ ಮತ್ತು ಸಮುದಾಯದೊಳಗಿನ ಮಹಿಳೆಯರ ಮೇಲಿನ ದೌರ್ಜನ್ಯಗಳು. ಧರ್ಮ ಮತ್ತು ಸಂಪ್ರದಾಯಗಳು ಮಹಿಳೆಯರ ಬದುಕನ್ನು ಪ್ರವೇಶಿಸಿದ ಮತ್ತು ಪ್ರಭಾವಿಸಿದ ರೀತಿಯಲ್ಲಿ ಅಂದಿನ ಆಚರಣೆಗಳಿಗೆ ತಾತ್ವಿಕಯ ನೆಲೆ ಕಂಡುಕೊಂಡ ಮಹಿಳೆಯರು ಧರ್ಮವನ್ನು ಅವರ ರಕ್ಷಣೆಯ ಶಕ್ತಿಯಾಗಿಯೇ ಪರಿಭಾವಿಸಿದರು. 1984ರಲ್ಲಿ ಇಂದಿರಾಗಾಂಧಿ ಹತ್ಯೆಯ ನಂತರ ನಡೆದ ಸಿಖ್ ವಿರೋಧಿ ಕಾರ್ಯಕ್ರಮಗಳಲ್ಲಿ ರೋಷ ಇದ್ದದ್ದು ಸಿಖ್ ಪುರುಷರ ವಿರುದ್ಧವಾಗಿಯೇ ಹೊರತು ಒಟ್ಟು ಸಿಖ್ ಸಮುದಾಯವನ್ನು ಕುರಿತಲ್ಲ. ದೆಹಲಿಯ ಬೀದಿಗಳಲ್ಲಿ ಗುಂಪು ಘರ್ಷಣೆಯಾದಾಗ ಸಿಖ್ ಗಂಡಸರನ್ನು ಎಳೆದಾಡಿ ಸುಟ್ಟು ಚಚ್ಚಿ ಕೊಲ್ಲುತ್ತಿದ್ದಾಗ ಸಿಖ್ ಮಹಿಳೆಯರು ಅಸಹಾಯಕರಾಗಿ ಸುಮ್ಮನೆ ನೋಡುತ್ತಾ ಇರಬೇಕಾದ ಪರಿಸ್ಥಿತಿಯಿತ್ತು. ತಮ್ಮ ಮಗ, ಗಂಡ, ತಂದೆ, ಸೋದರರು ಸಾಯುತ್ತಿದ್ದಾಗ ಅಸಹಾಯಕರಾಗಿ ನೋಡುವ ಪರಿಸ್ಥಿತಿ ಸಿಖ್ ಮಹಿಳೆಯರದಾಗಿತ್ತು. ಅಂದರೆ ಒಂದು ನಿರ್ದಿಷ್ಟ ಸಿದ್ಧಾಂತವನ್ನು ನಂಬಿದ ಜನರ ಕುತಂತ್ರಕ್ಕೆ ಈ ಮಹಿಳೆಯರು ಬಲಿಯಾಗಿದ್ದರು ಮತ್ತು ಸರ್ಕಾರ ಇವರಿಗೆ ಯಾವುದೇ ರೀತಿಯ ರಕ್ಷಣೆಯನ್ನು ಆಗ ಕೊಡಲಿಲ್ಲ. ಆಗ ಜಾತಿ, ಧರ್ಮ ಭೇದವನ್ನು ಮರೆತು ಎಲ್ಲ ಮಹಿಳೆಯರು ಪರಿಹಾರ ಕಾರ್ಯಗಳಲ್ಲಿ ತೊಡಗಿದರು. ಕೋಮುಭಾವನೆ ಹೆಂಗಸರ ಮನಸ್ಸು ಮತ್ತು ಕ್ರಿಯೆಗಳನ್ನು ಅಷ್ಟೊಂದು ಕಲುಷಿತಗೊಳಿಸಲಿಲ್ಲ. ಸಿಖ್ ಸಮುದಾಯಕ್ಕೆ ಉಂಟಾದ ನಷ್ಟ, ಅನಾಹುತಗಳನ್ನು ಪರಿಹಾರ ಮಾಡುವಲ್ಲಿ ಸ್ವಯಂ ಸೇವಾಸಂಸ್ಥೆಗಳು ಮಹತ್ತರ ಪಾತ್ರವಹಿಸಿದವು. ಈ ಪರಿಹಾರ ಕಾರ್ಯದಲ್ಲಿ ಮಹಿಳೆಯರದು ಪ್ರಮುಖಪಾತ್ರ. ಹೀಗಾಗಿ ಸಿಖ್ ಉಗ್ರಗಾಮಿಗಳ ಸಿಟ್ಟು ಮತ್ತು ದ್ವೇಷವೆಲ್ಲ ಕೆಲವು ರಾಜಕಾರಣಿಗಳು ಮತ್ತು ಸರ್ಕಾರದ ವಿರುದ್ಧವಾಗಿ ಕೇಂದ್ರೀಕೃತವಾಗಿತ್ತೇ ಹೊರತು ಒಂದು ಸಮುದಾಯದ ವಿರುದ್ಧವಲ್ಲ.

ಆದರೆ ಕಳೆದ ಎಂಭತ್ತು ಹಾಗೂ ತೊಂಭತ್ತರ ದಶಕದಲ್ಲಿ ರೂಪುಗೊಳ್ಳುತ್ತಿರುವ ಬಲ ಪಂಥೀಯ ಧಾರ್ಮಿಕ ಫ್ಯಾಸಿಸ್ಟ್ ಸಂಘಟನೆಯು ಹಿಂದುತ್ವದ ಹೆಸರಿನಲ್ಲಿ ಉಂಟು ಮಾಡುತ್ತಿರುವ ದಾಂಧಲೆಯು ಕೋಮುವಾದದ ಕರಾಳಮುಖವನ್ನು ತೋರಿಸುತ್ತಿದೆ. 1989ರಲ್ಲಿ ಅಯೋಧ್ಯಾ ರಾಮಮಂದಿರದ ಹೆಸರಿನಲ್ಲಿ ಭಾಗಲ್ಪುರನಲ್ಲಿ ನಡೆದ ರಕ್ತದೋಕುಳಿಯ ಸಂದರ್ಭದಲ್ಲಿ ಮಹಿಳೆಯರು ದಿಢೀರನೇ ಕ್ರಿಯಾಶೀಲರಾದರು. ಅವರು ಮೂಕಪ್ರೇಕ್ಷಕರಾಗಿ ಉಳಿದಿರಲಿಲ್ಲ. ದ್ವೇಷದ ಜ್ವಾಲೆಯನ್ನು ಹತ್ತಿಸುವಲ್ಲಿ, ಕೊಲೆ ಸುಲಿಗೆಗಳನ್ನು ನಡೆಸಿದ ಧರ್ಮ ಪ್ರಚಾರಕರ ಜೊತೆ ಕೈಗೂಡಿಸಿದರು. ಆದ್ದರಿಂದಲೇ ಹೆಂಗಸರನ್ನು ಕೋಮುಗಲಭೆಯ ಬಲಿಪಶುಗಳನ್ನಾಗಿ ಮಾತ್ರ ನೋಡಲು ಸಾಧ್ಯವಿಲ್ಲ. ಅಲ್ಪಸಂಖ್ಯಾತ ಮಹಿಳೆಯರ ನೋವು ನಲಿವುಗಳ ಭಾಗವಾದಷ್ಟೇ ಬಹು ಸಂಖ್ಯಾತ ಸಮುದಾಯದ ಮಹಿಳೆಯರಾಗಿಯೂ ಬೇರೆಯವರು ಬಲಿ ಪಶುಗಳಾಗುವುದಕ್ಕೂ ಮಹಿಳೆಯರು ಸಾಕ್ಷಿಯಾದರು. ಹೀಗೆ ಬಲಿಪಶುಗಳಾಗವ ಮತ್ತು ಹಿಂಸೆಯನ್ನು ಪ್ರಚೋದಿಸುವ - ಎರಡೂ ನೆಲೆಯಲ್ಲಿನ ಹೆಂಗಸರ ಪಾತ್ರ ಅತ್ಯಂತ ಸಂಕೀರ್ಣವಾದುದು ಮತ್ತು ಅವರು ಜೀವಿಸುತ್ತಿರುವ ಸಂದರ್ಭದ ಸಾಮಾಜಿಕ, ರಾಜಕೀಯ ಒತ್ತಡಗಳೇ ಈ ಸಂದರ್ಭವನ್ನೂ ನಿರ್ಧರಿಸುತ್ತದೆ. ಭಾಗಲ್‌ಪುರ್, ಅಹಮದಾಬಾದ್, ಅಯೋಧ್ಯಾ,

ಮುಂಬೈ ಮತ್ತು ಸೂರತ್ - ಮುಂತಾದೆಡೆಗಳಲ್ಲಿ ನಡೆದ ಗಲಭೆಗಳು ಮಹಿಳೆ ಮತ್ತು ಕೋಮುವಾದದ ಬಗ್ಗೆ ಮತ್ತೆ ಯೋಚಿಸುವಂತೆ ಮಾಡುತ್ತದೆ.

ಡಿಸೆಂಬರ್ 89 ಮತ್ತು ಜನವರಿ 90ರಲ್ಲಿ ಭಾಗಲ್‌ಪುರದಲ್ಲಿ ನಡೆದ ದೊಂಬಿ, ಲೂಟಿಗಳು ಕೋಮು ಕ್ರೌರ್ಯಕ್ಕೆ ಹೊಸ ಆಯಾಮವನ್ನೇ ಕೊಟ್ಟವು. ವಿ.ಹೆಚ್.ಪಿ. ಯಿಂದ ಪ್ರಚೋದಿಸಲ್ಪಟ್ಟು ಕಾಳ್ಗಿಚ್ಚಿನಿಂದ ಹಬ್ಬಿದ ಈ ಕ್ರೌರ್ಯ ಸಾವಿರಕ್ಕೂ ಹೆಚ್ಚು ಜನರನ್ನು ಬಲಿ ತೆಗೆದುಕೊಂಡಿತು. ಹೆಂಗಸರ ದೇಹಗಳೂ ಛಿದ್ರ ಛಿದ್ರವಾದವು. ದೇಶ ಇಬ್ಭಾಗವಾದ ನಂತರ ನಡೆದ ಅತ್ಯಂತ ಕ್ರೌರ್ಯದ ಘಟನೆಯಿದು. ಈ ಘಟನೆಯಿಂದ ಅಳಿದುಳಿದ ಹೆಂಗಸರ ಮನೋಕ್ಷೋಭೆ ಊಹೆಗೂ ನಿಲುಕದ್ದು. ಗಲಭೆಯಲ್ಲಿ ಮುಳುಗಿದ್ದ ಗಂಡಸರಿಗೆ ಪ್ರಚೋದನೆ ಕೊಡುತ್ತಿದ್ದ ಹೆಂಗಸರು ಈ ಗುಂಪಿನಲ್ಲಿದ್ದರು. ಅಲ್ಲಿಗೆ ಭೇಟಿ ನೀಡಿದಾಗ ನೊಂದ ಮಹಿಳೆಯರು ಕೆಲವರು ಹೇಳುತ್ತಿದ್ದ ಕಥೆಗಳು ನಿಜಕ್ಕೂ ಗಾಭರಿ ಹುಟ್ಟಿಸುತ್ತವೆ. ಮೊಹಲ್ಲಾದಲ್ಲಿದ್ದ ಹೆಂಗಸೊಬ್ಬಳು ತಮ್ಮ ಗಂಡಸರಿಗೆ ಮುದುಕನೊಬ್ಬನನ್ನು ಬಿಟ್ಟು ಯುವಕನನ್ನು ಸಾಯಿಸುವಂತೆ ಹೇಳಿದಳಂತೆ. ಏಕೆಂದರೆ ಈ ಯುವಕ ಬದುಕುಳಿದರೆ ಅವನ್ನು ಮತ್ತಷ್ಟು ಸಂತತಿಗೆ ಕಾರಣನಾಗಬಹುದು, ಎಂದು. ಮುಸ್ಲಿಂರಿಗೆ ಆಶ್ರಯ ನೀಡಿದ ಹಿಂದೂ ಮಹಿಳೆಯರು ಇಲ್ಲಿದ್ದರು. ಮುಸ್ಲಿಂರಿಗೆ ಆಶ್ರಯ ನೀಡಿದ ಒಬ್ಬ ವಿಧವೆ ಶಾಲಾ ಶಿಕ್ಷಕಿಗಾದ ದುರವಸ್ಥೆಯನ್ನು ಅವರು ವಿವರಿಸಿದರು. ಶಾಲಾ ಶಿಕ್ಷಕಿಗೆ ಮನೆಯಿಂದ ಹೊರಗೆ ಬರಲು ಹೇಳಿ ಮುಸ್ಲಿಂರಿದ್ದ ಆ ಮನೆಯನ್ನೇ ಧ್ವಂಸ ಮಾಡಿ ಬೆಂಕಿ ಹಚ್ಚಿದರು. ನಂತರ ಕೆಲವು ಘಂಟೆಗಳ ನಂತರ ಹಿಂತಿರುಗಿ ಬಂದ ಶಿಕ್ಷಕಿ ಅಳಿದುಳಿದ ಜನ ಬಾಯಾರಿಕೆಗಾಗಿ ನೀರು ಕೇಳಿದಾಗ, ನೀರು ಕೊಟ್ಟಾಗ ಅಲ್ಲಿ ಸುತ್ತ ಮುತ್ತಲಿದ್ದ ಮಹಿಳೆಯರು ಅವಳಿಗೆ ನೀರು ಕೊಡದಂತೆ ತಡೆದರು.

ಇದೆಲ್ಲಕ್ಕಿಂತ ಅತ್ಯಂತ ಭಯಾನಕವಾದ ಅನುಭವವೆಂದರೆ ಈ ಸಂದರ್ಭದಲ್ಲಿ 'ಸಾಧ್ವಿ ರಿತಾಂಭರ' ನಡೆದುಕೊಂಡ ರೀತಿ. ರಾಮ ಜನ್ಮಭೂಮಿಯ ಪ್ರಚಾರದ ಸಂದರ್ಭದಲ್ಲಿ ಹಿಂದೂ ಪುರುಷರ ಪುರುಷತ್ವವನ್ನು ಪ್ರಚೋದಿಸುವಂತೆ ಅವಳು ಮಾಡುತ್ತಿದ್ದ ಭಾಷಣಗಳು. ಆ ಭಾಷಣಗಳ ಧ್ವನಿ ಸುರುಳಿ ಸಹಸ್ರಾರು ಸಂಖ್ಯೆಯಲ್ಲಿ ಕೋಮುಭಾವನೆಯನ್ನು ಪ್ರಚೋದಿಸುವ ಮಂತ್ರವಾಯಿತು. ಈ ಎಲ್ಲದರಿಂದ ಒಂದು ಅಂಶ ಸ್ಪಷ್ಟ. ಅಲ್ಪ ಸಂಖ್ಯಾತ ಸಮುದಾಯದ ಹೆಂಗಸರಷ್ಟೇ ಬಹುಸಂಖ್ಯಾತ ಸಮುದಾಯದ ಮಹಿಳೆಯರೂ ಕೋಮುಗಲಭೆಯ ಬಲಿಪಶುಗಳಾಗಿ ನರಳಿದರೆಂಬುದು ನಿಜವಾದರೂ, ಕೋಮುಭಾವನೆಯ ಪ್ರಚೋದನೆಗೂ ಮಹಿಳೆಯರು ಬಳಕೆಯಾದದ್ದು ವಿಪರ್ಯಾಸ.

ಮುಸ್ಲಿಂರ ವಿರುದ್ಧ ಇದ್ದ ದ್ವೇಷದ ಜ್ವಾಲೆ ಇತ್ತೀಚಿನ ದಿನಗಳಲ್ಲಿ ಮತ್ತೊಂದು ಅಲ್ಪಸಂಖ್ಯಾತ ಸಮುದಾಯವಾದ ಕ್ರಿಶ್ಚಿಯನರ ನಡುವೆಯೂ ಆರಂಭವಾದದ್ದು ಇತ್ತೀಚಿನ ಬೆಳವಣಿಗೆ. ಸೋನಿಯಾ ಗಾಂಧಿ ರಾಜಕೀಯಕ್ಕೆ ಬಂದು ಅಧಿಕಾರದ ಗದ್ದುಗೆ ಹಿಡಿಯಬಹುದೆನ್ನುವ ಹಿನ್ನೆಲೆಯ ಹಿಂದೆ ಮತ್ತು ಹಿಂದುತ್ವದ ಪ್ರಬಲ ಚಳುವಳಿಯ ಹಿನ್ನೆಲೆಯಲ್ಲಿ ಕ್ರಿಶ್ಚಿಯನ್ ಸಮುದಾಯವು ಆಕ್ರಮಣಕ್ಕೆ ಒಳಗಾಗಲು ಆರಂಭಿಸಿದೆ. ಹೆಣ್ಣಿನ ಶೀಲ, ಪಾತಿವ್ರತ್ಯವನ್ನು ವೈಭವಿಸುವ, ಮಾತೆಯೆಂದು ಗೌರವಿಸುವ ಸಂಘ ಪರಿವಾರವೇ ಕ್ರಿಶ್ಚಿಯನ್ ನನ್‌ಗಳ ಮೇಲೆ ದಾಳಿ ನಡೆಸಿ ಅತ್ಯಾಚಾರ ಮಾಡಲು ಪ್ರಯತ್ನಿಸಿತು.

ಇಂದು ಸ್ತ್ರೀವಾದಿಗಳು ಪುರುಷದಬ್ಬಾಳಿಕೆಯ ವಿರುದ್ಧ ಎತ್ತುತ್ತಿರುವ ಧ್ವನಿಗಳನ್ನು ಸದೆ ಬಡಿಯುವ ಪ್ರಯತ್ನವಾಗಿಯೂ ಈ ಸಂದರ್ಭಗಳನ್ನು ವಿಶ್ಲೇಷಿಸಬಹುದು. ಸ್ತ್ರೀಯರಿಬ್ಬರ ನಡುವಿನ ಲೆಸ್‌ಬಿಯನ್ ಸಂಬಂಧಗಳನ್ನು ವಿರೋಧಿಸಬೇಕೆನ್ನುವ ಸಂದರ್ಭದಲ್ಲಿ ಅವರಿಗೆ ಕೌಟುಂಬಿಕ ಹಿಂಸೆಯ ನೆಲೆಗಳು ಕಾಣಿಸುವುದೇ ಇಲ್ಲ. ಸಂಸ್ಕೃತಿಯ ಕವಚದಲ್ಲಿ ಹಿಂದೂ ಸಮಾಜದ ಎಲ್ಲ ಕೊಳಕು ಆಚರಣೆಗಳನ್ನು ಮುಚ್ಚಿಟ್ಟುಕೊಳ್ಳುವ ಮನೋಭಾವ 'ವಾಟರ್' ಚಿತ್ರದಲ್ಲಿ ಇನ್ನೂ ಸ್ಫುಟವಾಗಿ ಎದ್ದು ಕಾಣುತ್ತದೆ. ವಾರಣಾಸಿಯ ವಿಧವೆಯರ ನೋವಿಗೆ ಸ್ಪಂದಿಸದ ಹಿಂದೂತ್ವವಾದಿಗಳಿಗೆ 'ವಾಟರ್' ಚಲನಚಿತ್ರವನ್ನು ವಿರೋಧಿಸುವುದು ಸಮಾಜದ ಸ್ಥಗಿತತೆಯನ್ನು ಕಾಪಾಡಿಕೊಳ್ಳುವ ಮುಖ್ಯ ತಾತ್ವಿಕ ನೆಲೆಯಾಗುತ್ತದೆ.

ಇವೆಲ್ಲಾ ಹಿಂದುಗಳಲ್ಲದ ಅಲ್ಪಸಮುದಾಯದ ಮಹಿಳೆಯರ ಮೇಲಿನ ದಾಳಿಯಾದರೆ, ಹಿಂದೂಗಳೇ ಆಗಿ ಹಿಂದೂ ಗೃಹಿಣಿತ್ವದ ಆದರ್ಶವನ್ನು ಚರ್ಚೆಗೊಳಪಡಿಸುವ 'ವಾಟರ್' ಚಲನಚಿತ್ರದ ವಿರುದ್ಧವೂ ದಾಳಿ ನಡೆಸಿದರು. ಹಾಗೆಯೇ 'ಫೈರ್' ಚಿತ್ರವು ಹಿಂದುತ್ವ ಪ್ರತಿಪಾದಕರಾದ ಮೂಲಭೂತವಾದಿಗಳ ಫ್ಯಾಸಿಸ್ಟ್ ಮನೋಭಾವಕ್ಕೆ ಹಿಡಿದ ಕನ್ನಡಿಯಾಗಿದೆ. ಈ ಚಿತ್ರಗಳ ವಿರುದ್ಧದ

ಪ್ರತಿಭಟನೆಯಲ್ಲಿ ಮಹಿಳೆಯರೇ ಪ್ರಮುಖ ಪಾತ್ರ ವಹಿಸಿದರು ಎಂಬ ಅಂಶವನ್ನು ಇಲ್ಲಿ ಮರೆಯಲಾಗದು. ಕ್ರಿಶ್ಚಿಯನ್ ಸಮುದಾಯದ ಮೇಲೆ ಹಿಂದೂತ್ವವಾದಿಗಳು ನಡೆಸಿದ ದಾಳಿಗೆ ವ್ಯಾಪಕವಾದ ಅಜೆಂಡಾ ಇದೆ. ನಾಗರೀಕತೆಯಿಂದ ದೂರವಾದ ಬುಡಕಟ್ಟು ಜನಸಮುದಾಯದ ನಡುವೆ ಕೆಲಸ ಮಾಡುತ್ತಿರುವ ಕ್ರಿಶ್ಚಿಯನ್‌ರನ್ನು ಹೊಡೆದೋಡಿಸಲು ಅವರಂತೆ ಕೆಲಸ ಮಾಡಲು ಸಾಧ್ಯವಿಲ್ಲದಿದ್ದರೂ, ಹಿಂಸೆ, ಬೆದರಿಕೆಯ ಅಸ್ತ್ರವನ್ನು ಉಪಯೋಗಿಸಲು ಇವರು ಹಿಂದೆ ಬೀಳಲಿಲ್ಲ. ಆ ಅಸ್ತ್ರಗಳಲ್ಲಿ ಕ್ರೈಸ್ತ ಸಂನ್ಯಾಸಿಯರ ಮೇಲೆ ನಡೆಸಿದ ಅತ್ಯಾಚಾರವೂ ಒಂದು.

ಈ ಎಲ್ಲದರ ಹಿನ್ನೆಲೆಯಲ್ಲಿ ಅತ್ಯಂತ ಮುಖ್ಯವಾದ ಅಂಶವನ್ನು ನಾವೆಲ್ಲರೂ ಮರೆಯಲಾಗದು. ಬಲಪಂಥೀಯ ರಾಜಕೀಯ ಪಕ್ಷಗಳು ಮಹಿಳೆಯರನ್ನು ಸಂಘಟಿಸುವತ್ತ ಹೆಚ್ಚು ಹೆಚ್ಚು ಒಲವು ತೋರಿಸುತ್ತಿದ್ದಾರೆ. ಆದ್ದರಿಂದ 'ಸಾಧ್ವಿ' ರಿತಂಭರಾ ಮತ್ತು ಉಮಾ ಭಾರತಿಯವರು ಹಿಂದುತ್ವದ ರಚನೆಯನ್ನು ಉಳಿಸಿಕೊಳ್ಳಲು ಅತ್ಯಂತ ಅವಶ್ಯಕ ಶಕ್ತಿಗಳಾಗಿ ನಮಗೆ ಕಾಣಿಸುತ್ತಾರೆ. ಕುಟುಂಬದೊಳಗೆ ಹೆಣ್ಣನ್ನು ಶೋಷಿಸುವ ಪುರುಷರು ಸಾರ್ವಜನಿಕ ಜೀವನದಲ್ಲಿ ಸಮುದಾಯಗಳನ್ನು ರಕ್ಷಿಸುವ ಧಾರ್ಮಿಕ ಹೀರೋಗಳಾಗಿ ಬಿಡುವುದರಿಂದ ಮಹಿಳೆಯರಿಗೆ ತಮ್ಮ ಶೋಷಣೆಯ ನೆಲೆಗಳೇ ಅರ್ಥವಾಗದಿರಬಹುದು. ಹಿಂದುತ್ವದ ಈ ಸೈದ್ಧಾಂತಿಕ ಕಾರ್ಯತಂತ್ರಕ್ಕೆ ನಮ್ಮ ಪ್ರತಿಕ್ರಿಯೆ ಏನಾಗಿರಬೇಕು? ಅವರ ಕಡೆ ಇರುವ ಬಹುಸಂಖ್ಯೆಯನ್ನು ನೋಡಿ ನಾವು ನಿರಾಶಾವಾದಿಗಳಾಗಬೇಕಿಲ್ಲ, ಮಹಿಳೆಯರು ಬದುಕುವ ಸನ್ನಿವೇಶದ ಸಂಕೀರ್ಣತೆಯನ್ನು ಅರ್ಥಮಾಡಿಕೊಂಡು, ಅತ್ಯಂತ ವಿಶಾಲವಾದ ಸಮಾನತೆಯ ಪ್ರಜಾಪ್ರಭುತ್ವವಾದಿ ವೇದಿಕೆಯ ನಿರ್ಮಾಣದತ್ತ ಕೆಲಸ ಮಾಡಬೇಕು. ಸ್ತ್ರೀಪುರುಷರಿಬ್ಬರೂ ಒಟ್ಟಾಗಿ ಸೇರಿ ನಡೆಸಬೇಕಾದ ಈ ಹೋರಾಟವು ಮಾನವೀಯತೆಯ ಮೌಲ್ಯಗಳನ್ನು ಆರಾಧಿಸುವ, ಪುರುಷಪ್ರಾಧಾನ್ಯವಲ್ಲದ, ವ್ಯಕ್ತಿಗಳಾಗಲೀ, ಸಮುದಾಯಗಳಾಗಲೀ ಬಲಿ ಪಶುಗಳಾಗದಂತಹ ಸಮಾಜರಚನೆಯನ್ನು ದೃಷ್ಟಿಯಲ್ಲಿಟ್ಟುಕೊಳ್ಳಬೇಕು. ಮಹಿಳಾ ಚಳುವಳಿಯು ಇಂದು ಎದುರಿಸಬೇಕಾದ ಬಹುಮುಖ್ಯ ಸವಾಲೆಂದರೆ, ದಮನದ ಎಲ್ಲ ನೆಲೆಗಳನ್ನೂ ವಿರೋಧಿಸುವಂತಹ ಸಂಸ್ಕೃತಿಯ ರಚನೆಯತ್ತ ಸಾಗಬೇಕು.

- ಉಮಾ ಚಕ್ರವರ್ತಿ

RNI No. 45577/88

"Achala" 108, Skyline Surabhi,
14-9, Vidyapeeta Road, BSK III Stage,
Bangalore - 560 085

To: Smt/Sri

CPMG/KA/BG-8/2001
Book-Post/News Letter